ಪ್ರಕಟನೆಯ ೨೮ ನೆಯ ವರ್ಷ : ೧೯೯೩

# ಸಂಕ್ರಮಣ

೨೫೩

---

ದೇವೀ ಪ್ರಸಾದ ಚಟ್ಟೋಪಾಧ್ಯಾಯ
ತತ್ವ ಶಾಸ್ತ್ರದ ಮೇಲೆ ಧರ್ಮಶಾಸ್ತ್ರಕಾರರ ಹಿಡಿತ

ಯೋಗೀಂದರ್ ಸಿಕಂದ್
ಮನುಸ್ಮೃತಿ ಮತ್ತು ಭಾರತದ ಸಂವಿಧಾನ

ಸದಾನಂದ ಪಾಟೀಲ
ಡಾ. ಕಲಬುರ್ಗಿ ಅವರ 'ಕನ್ನಡ ಸಂಶೋಧನ ಶಾಸ್ತ್ರ'

ಗಣೇಶ ಅಮೀನಗಡ
ಲಿಂಬಾಳೆ ಅವರ 'ಅಕ್ರಮ ಸಂತಾನ'

ಜಿ. ಕೆ. ರವೀಂದ್ರಕುಮಾರ, ಎಂ. ಎಚ್. ಲಕ್ಷ್ಮೀನರಸಮ್ಮ,
ಬಿ. ಚಿನ್ನಸ್ವಾಮಿ, ವಿಡಂಬಾರಿ, ಎನ್. ಎ. ಕುಲಕರ್ಣಿ,
ಭಾರತಿ ಪಾಟೀಲ, ದಿಲೀಪ ಚಿತ್ರೆ, ಯಶೋದ ರಾಜೇಂದ್ರ
ಇವರ ಕವನಗಳು

ಚಂಪಾಕಾಲಂ
ಪೇಜಾವರ : ಪೇಚುಗಳು-ಪೇಚಾಟಗಳು

---

ಸಂಪುಟ ೨೮: ಸಂಚಿಕೆ ೯ ಸಪ್ಟಂಬರ ೧೯೯೩

# ಸಂಕ್ರಮಣ

ಸಪ್ಟಂಬರ ೧೯೯೩
ಸಂಪುಟ ೨೮ : ಸಂಚಿಕೆ ೯

ಸಂಪಾದಕಿ
ನೀಲಾ ಪಾಟೀಲ
ಸಲಹಾ ಸಂಪಾದಕ
ಚಂದ್ರಶೇಖರ ಪಾಟೀಲ





**SANKRAMANA 253**
A Monthly in Kannada
September. 1993 Vol. XXVIII No 9
Sankramana Prakashana Dharwad-580 001 Phone : 40509
Printed at Chandana Mudrana, Dharwad 8 Phone : 44863
Annual Subscription : Rs. 50/-

# ಪೇಜಾವರ: ಪೇಚುಗಳು-ಪೇಚಾಟಗಳು

## ಚಂದ್ರಶೇಖರ ಪಾಟೀಲ

॥ಶ್ರೀರಾಮ ವಿಟ್ಠಲೌ ವಿಜಯೇತೆ॥

ಸ್ವಸ್ತಿ! ಶ್ರೀಮತ್ ಪರಮ ಹಂಸೇತ್ಯಾದಿ ಬಿರುದಾಂಕಿತ ಶ್ರೀಮದುಡುಪಿ ಶ್ರೀಕೃಷ್ಣ ರಾಮ ವಿಠ್ಠಲ ದಿವ್ಯ ಪಾದ ಪದ್ಮಾರಾಧಕ ಜಗದ್ಗುರು ಶ್ರೀ ಮಧ್ವಾಚಾರ್ಯ ವೇದಾಂತ ಸಿಂಹಾಸನಾಧೀಶ್ವರ ಶ್ರೀಮದಧೋಕ್ಷಜ ತೀರ್ಥ ಶುಭ ಸಂಪ್ರದಾಯ ಪ್ರವರ್ತಕ ಶ್ರೀ ವಿಜಯ ಧ್ವಜ ತೀರ್ಥಾಧಿಷ್ಠಿತ......

(ಪ್ರಿಯ ಓದುಗರೇ, ಇದೇನು ಯಾವ ಲೋಕದಿಂದ ಅಮರ ವಾಣಿಯ ಈ ಸಮರ ಧಾರೆ?-ಎಂದು ವಿನಾ ಕಾರಣ ಸ್ತಂಭೀಭೂತರಾಗದೆ ಇನ್ನೊಂದೆರಡು ಸಾಲು ಮಾತ್ರ ಓದುವಂಥವರಾಗಿರಿ.)

...ತೀರ್ಥಾದಿಷ್ಠಿತ ಶ್ರೀ ಪೇಜಾವರ ಅಧೋಕ್ಷಜ ಮಠಾಧೀಶ ಶ್ರೀ ಶ್ರೀ ವಿಶ್ವೇಶ ತೀರ್ಥ ಶ್ರೀಪಾದಂಗಳವರು ನಮ್ಮ ಸಂಸ್ಥಾನದ ಮುಖ್ಯಾಭಿಮಾನಿಗಳಾದ ಶ್ರೀಯತ ಚಂದ್ರಶೇಖರ ಪಾಟೀಲ್ ಇವರಿಗೆ ಮಾಡುವ ಸಪ್ರೇಮ ನಾರಾಯಣ ಸ್ಮರಣೆಗಳು.

ನಾವು ಶ್ರೀ ಕೃಷ್ಣ, ರಾಮ, ವಿಠ್ಠಲ ದೇವರ ಪೂಜಾ, ಜಪ, ಪ್ರವಚನ, ಧರ್ಮ, ತತ್ವ ಪ್ರಕಾರ ಮುಂತಾದ ಕಾರ್ಯಗಳನ್ನು ನಡೆಸಿಕೊಂಡು ಕುಶಲಿಗಳಾಗಿದ್ದೇವೆ. ನಿಮ್ಮ ಕ್ಷೇಮವನ್ನು ಪದೇ ಪದೇ ತಿಳಿಸುತ್ತ ನಮ್ಮನ್ನು ಸಂತೋಷ ಪಡಿಸುತ್ತಿರಬೇಕು...

ಇದ್ದಕ್ಕಿದ್ದಂತೆ ಒಂದು ದಿನ ನನ್ನ ಯುನಿವರ್ಸಿಟಿ ವಿಳಾಸಕ್ಕೆ ಬಂದ ಈ ಪತ್ರವನ್ನು ನಾನು ಗಾಬರಿ ಗಾಬರಿಯಿಂದಲೇ ಓದಲು ಸುರುಮಾಡಿದರೂ ಕೊನೆಗೆ 'ನಾರಾಯಣ ಸ್ಮರಣೆ'ಗೆ ಎಂದಾಗ, 'ಓಹೋ ಇದು ನಮ್ಮ ಪೇಜಾವರ ಸ್ವಾಮಿ!' ಎಂದು ಉದ್ಗಾರ ತೆಗೆದು ಆನಂದ ತುಂದಿಲನಾದೆ. ಪೇಜಾವರರು ತಮ್ಮ ಈ

ವರ್ಷದ ಚಾತುರ್ಮಾಸ್ಯ ವ್ರತವನ್ನು ಹುಬ್ಬಳ್ಳಿ-ಧಾರವಾಡ ನಗರಗಳಲ್ಲಿ ಆಚರಿಸುವ ನಿಮಿತ್ತ ಇಲ್ಲಿಯೇ ಕೆಲ ದಿನ ಕ್ಯಾಂಪು ಹೊಡೆಯುವ ಸುದ್ದಿ ಪೇಪರಿನಲ್ಲಿ ಓದಿದ್ದೆ. ಆದರೆ ಅವರಿಂದ, ಅಥವಾ ಅವರ ಪೈಕಿಯವರಿಂದ, ಈ ಬಗೆಯ ಆಹ್ವಾನ ಬಂದೀತೆಂದು ನಾನು ಕನಸು ಮನಸಿನಲ್ಲಿಯೂ ನೆನೆಸಿರಲಿಲ್ಲ.

ಸಿಕ್ಕ ಚಾನ್ಸು-ಬಿಡಬಾರದೆಂದು ನಾನು ಬಂಡಾಯ ಸಾಹಿತ್ಯ ಸಂಘಟನೆಯ ಪರವಾಗಿ ಒಂದು ಪತ್ರ ಬರೆದೆ:

೧೬ ಜುಲೈ ೧೯೯೩

ಸನ್ಮಾನ್ಯ ಶ್ರೀ ಪೇಜಾವರ ಸ್ವಾಮಿಗಳಲ್ಲಿ ಸಪ್ರೇಮ ಶಂಬೂಕ ಸ್ಮರಣೆಗಳು.

ನಿಮ್ಮ ಸದ್ಭಕ್ತರೊಬ್ಬರಿಂದ ನಿಮ್ಮ ಚಾತುರ್ಮಾಸ್ಯ ಕಾರ್ಯಕ್ರಮದ ಆಮಂತ್ರಣ ತಲುಪಿದೆ. ಲೌಕಿಕದ ರಾಜಕಾರಣದಲ್ಲಿ ತೊಡಗಿಯೂ ನೀವು ಭಗವತ್ ಚಿಂತನೆಗಾಗಿ ಬಿಡುವು ಮಾಡಿಕೊಳ್ಳುತ್ತಿರುವುದು ಶ್ಲಾಘನೀಯವಾಗಿದೆ. ೧೯೯೨ ಡಿಸೆಂಬರ ೬ರ ಅಯೋಧ್ಯೆಯ ಕರಸೇವೆಯಲ್ಲಿ, ಪ್ರತ್ಯಕ್ಷ ಪಾಲುಗೊಂಡು ನೀವು ಮರಳಿದ ನಂತರ ನಮ್ಮ ಸಾಮಾಜಿಕ ಬದುಕಿನ ಅನೇಕ ನೆಲೆಗಳಲ್ಲಿ ಚರ್ಚೆಯ ವಸ್ತುವಾಗಿರುವಿರಿ. ಪತ್ರಿಕೆಗಳ ಮೂಲಕ ವಿವರಣೆಯನ್ನೂ ಕೊಟ್ಟಿರುವಿರಿ. ಈಗ ನಮ್ಮ ಬಂಡಾಯ ಸಾಹಿತ್ಯ ಸಂಘಟನೆಯ ಪರವಾಗಿ ಒಂದು ಸಾರ್ವಜನಿಕ ಸಂವಾದಕ್ಕಾಗಿ ನಿಮ್ಮನ್ನು ಆಮಂತ್ರಿಸುತ್ತಿರುವೆ. ಈ ಆಮಂತ್ರಣವನ್ನು ಸ್ವೀಕರಿಸಿ ನಿಮ್ಮ ಬಗ್ಗೆ ಕೆಲವರಿಗೆ ಇರಬಹುದಾದ ಸಂಶಯ-ಅಪನಂಬಿಕೆಗಳನ್ನೂ, ಹಲವರಿಗೆ ಇರಬಹುದಾದ ಭ್ರಮೆಗಳನ್ನೂ ಹೋಗಲಾಡಿಸುವ ಅವಕಾಶ ನಿಮಗಿದೆ. ನಿಮಗೆ ಅನುಕೂಲವಾದ ದಿನ ಹಾಗೂ ವೇಳೆಯನ್ನು ನಿಗದಿಪಡಿಸಿ ತಿಳಿಸಿದರೆ ಅನುಕೂಲ ವಾಗುತ್ತದೆ,

ನಿಮ್ಮ ವಿಶ್ವಾಸದ

**ಚಂಪಾ**

ಪೇಜಾವರರ ಧಾರವಾಡ ಕ್ಯಾಂಪಿನ ಮಾಳಮಡ್ಡಿ ವಿಳಾಸಕ್ಕೆ ನಾನು ಪತ್ರ ಹಾಕಿದ ಮರುದಿನವೇ ಅವರಿಂದ ನನ್ನ ಮನೆಗೆ ಫೋನು-ಕರೆ. ಪತ್ರ ತಲುಪಿದ ಬಗ್ಗೆ ಹೇಳಿ, "ಬಹಿರಂಗ ಸಂವಾದಕ್ಕೆ ನನ್ನ ಒಪ್ಪಿಗೆ ಇದೆ. ನಮ್ಮಲ್ಲಿಗೆ ಬಂದು ಮಾತಾಡಿರಿ. ದಿನಾಂಕ ಗೊತ್ತು ಪಡಿಸೋಣ" ಅಂದರು...ಅವರ ಜೊತೆಗೆ ಅನೇಕ ವರ್ಷಗಳಿಂದ ಅಕ್ಷರಗಳ ಮೂಲಕ (ನೇರ ಪತ್ರಗಳು ಮತ್ತು ಪತ್ರಿಕಾ ಪ್ರಕಟನೆಗಳು) ನನ್ನ ವ್ಯವಹಾರ ನಡೆದೇ ಇದ್ದರೂ ಅವರನ್ನು ನಾನು ಪ್ರತ್ಯಕ್ಷ ನೋಡಿರಲಿಲ್ಲ. ಹೀಗಾಗಿ ಎರಡೂ ಕಡೆಯಿಂದ ಕಾತರ, ನಿರೀಕ್ಷೆ, ಕುತೂಹಲ ಇರುವುದು ಸಹಜವಾಗಿತ್ತು.

ಅದೇ ರಾತ್ರಿ ಮತ್ತೆ ಫೋನು. ನಾನು ಊಟ ಮಾಡಿ ಕುಳಿತಿದ್ದೆ. ಅವರ ದನಿ ಕೇಳಿದಾಗ, "ಊಟ ಆತೇನ್ರಿ?" ಅಂದೆ. ಹೀಗೆ ಜವಾರಿ ಭಾಷೆಯಲ್ಲಿ ಆತ್ಮೀಯ

ವಾಗಿ ಅವರನ್ನು ಯಾರೂ ಮಾತಾಡಿಸಿರಲಿಕ್ಕಿಲ್ಲ. ಆವರ ಸ್ಪಂದನದಲ್ಲಿ ಸ್ವಲ್ಪ ಗಡಿಬಿಡಿ ಇತ್ತು....ನನ್ನ ಪತ್ರದ 'ಶಂಬೂಕ ಸ್ಮರಣೆ'—ಅವರ ನಾರಾಯಣಾಸ್ತ್ರಕ್ಕೆ ಎದುರಾಗಿ ಬಿಟ್ಟ ನನ್ನ ಶಂಬೂಕಾಸ್ತ್ರ—ಅವರಿಗೆ ನಾಟಿತ್ತು. "ಅದಕ್ಕೆ ಪ್ರತಿಯಾಗಿ ನಿಮಗೆ ಶಬರೀ ಸ್ಮರಣೆ ಹೇಳುತ್ತೇನೆ." ಅಂದರು. ಅದೊಂದು ಜೋಕು ಎಂಬಂತೆ ನಕ್ಕರು. ನಾನೂ ನಕ್ಕೆ. ಎಲ್ಲಿಯ ಶಂಬೂಕ, ಎಲ್ಲಿಯ ಶಬರಿ? ಬ್ರಾಹ್ಮಣರ ಏಜಂಟನಾಗಿ ಶಂಬೂಕನನ್ನು ವಧಿಸಿದ ಕೊಲೆಗಡುಕ ಶ್ರೀ ರಾಮನ ರಕ್ಷಣೆಗೆ ಈ ರಾಮ-ದಾಸರು ಶಬರಿಯಂಥ ಮುದುಕಿಯನ್ನು ಶಿಖಂಡಿಯಂತೆ ಬಳಸಿದ್ದು ಕ್ರೂರ ವ್ಯಂಗ್ಯವೆನ್ನಿಸಿತ್ತು.

"ಮತ್ತೆ...ಯಾವಾಗ ಬರ್ತೀರಿ?" ಅಂದರು. "ನಾಳೆ-ನಾಡದು" ಅಂದೆ.

●

ಸೋಮವಾರ ನಮ್ಮ ಡಿಪಾರ್ಟಮೆಂಟಿಗೆ ಜಯತೀರ್ಥಾಚಾರ್ಯ ಮಳಗಿಯವರು ಬಂದು. "ಇವತ್ತು ನೀವು ಬರ್ತೀರೆಂತ ಗುರುಗಳು ಹೇಳಿದ್ರು" ಅಂದಾಗ, ಅವರು ಪೇಜಾವರರ ಹರಿಕಾರರಾಗಿಯೋ ಬೇಹುಗಾರರಾಗಿಯೋ ಬಂದಿರುವುದು ನನಗೆ ವಾಸನೆ ಬಡಿಯಿತು. "ಯಾವುದರ ಬಗ್ಗೆ ಚರ್ಚೆ?" ಅಂತ ಅವರು ಕೇಳಿದಾಗ "ನಿಮ್ಮ ಅಯೋಧ್ಯೆ ಮತ್ತು ನಿಮ್ಮ ಕರಸೇವೆ ಬಗ್ಗೆ" ಅಂತ ನೇರವಾಗಿ ಹೇಳಿದೆ. ಆಚಾರ್ಯರು ಬಾಯ್ತುಂಬ ನಕ್ಕರು.

ಧಾರವಾಡ ಎಂಬ ಹೆಸರಿನ ಧಾರಾನಗರಿಯ ಅನೇಕ 'ಪ್ರೇಕ್ಷಣೀಯ' ವ್ಯಕ್ತಿಗಳಲ್ಲಿ ಈ ಆಚಾರ್ಯರೂ ಒಬ್ಬರು. ಅವರು ಮೊದಲು ಮುಂಬೈಯ ಸತ್ಯಧ್ಯಾನ ವಿದ್ಯಾಪೀಠದಲ್ಲಿ ಇದ್ದಾಗಿನಿಂದಲೂ ಅವರ ಪರಿಚಯ. ಈಗ ಕರ್ನಾಟಕ ವಿಶ್ವವಿದ್ಯಾಲಯದ ಸಂಸ್ಕೃತ ವಿಭಾಗದಲ್ಲಿ 'ಪಂಡಿತ' ರೆಂದು ಕೆಲಸ ಮಾಡುತ್ತಿದ್ದಾರೆ. ಅವರು ನಿಜವಾದ ಪಂಡಿತರೂ ಹೌದು. ಧಾರವಾಡದ ಸುತ್ತಮುತ್ತ ವಿದ್ವಜ್ಜನರ ಸಮಾವೇಶ ನಡೆದಾಗೆಲ್ಲ ಮಳಗಿಯವರ ಅಮರವಾಣಿ ಮೊಳಗುತ್ತಲೇ ಇರುತ್ತದೆ. ...ಅವರು ಪ್ರೇಕ್ಷಣೀಯರಾಗಿರುವುದು ಅವರ ಡ್ರೆಸ್ಸಿನಿಂದಾಗಿ. ನಮ್ಮ ಕ್ಯಾಂಪಸ್ಸಿನಲ್ಲಿ ಮಳೆ-ಚಳಿ-ಗಾಳಿ-ಬಿಸಿಲು-ಭೂಕಂಪ ಏನೇ ಇದ್ದರೂ ಯಾವಾಗಲೂ ಫುಲ್ ಸೂಟಿನ (ಅಂದರೆ ಬೂಟು ಪ್ಯಾಂಟು ನೆಕ್‌ಟೈ ಕೋಟು: ಹ್ಯಾಟೊಂದನ್ನು ಬಿಟ್ಟು) ಹೆಡಮುರಿಗೆಯಲ್ಲಿ ತಿರುಗಾಡುವ ಕೆಲವರು ಪ್ರಾಧ್ಯಾಪಕರಿದ್ದಾರೆ. ಇವರು ಒಂದು ತುದಿಯಾದರೆ ನಮ್ಮ ಆಚಾರ್ಯರು ಇನ್ನೊಂದು ತುದಿ. ಪಂಜೆ, ಶಲ್ಯ, ಜನಿವಾರ, ಜುಟ್ಟು, ಹಣೆಗೆ ನಾಮ—ಇಷ್ಟೇ ಅವರ ಆವರಣ. 'ಸಂಸ್ಕಾರ' 'ಫಣಿಯಮ್ಮ' ದಂಥ ಸಿನೇಮಾದಲ್ಲೋ, 'ಸತ್ತವರ ನೆರಳು' ದಂಥ ನಾಟಕದಲ್ಲೋ ಪಾರ್ಟು ಮಾಡಿ, ಬಹುಶಃ ಅರಿವಿಲ್ಲದೆ ಅದೇ ಮೇಕಪ್ಪಿನಲ್ಲಿ ಎಲ್ಲಾ ಕಡೆ ಓಡಾಡುವ ನಟಭಯಂಕರ

ರಂತೆ ನನಗೆ ಅವರು ಒಮ್ಮೊಮ್ಮೆ ಕಾಣುತ್ತಾರೆ. ಪುರಾತನ ಪಳೆಯುಳಿಕೆಯಂತೆ ಕಂಡರೂ ಅವರು 'ಕನ್ನಡ' ಮಾತಾಡಲು ಬಾಯಿ ತೆಗೆದಾಗ ಮಾತ್ರ ಅಗದೀ ಉತ್ತರ ಕರ್ನಾಟಕದ ಜವಾರಿ ಮುತ್ತುಗಳನ್ನೇ ಉದುರಿಸುವುದು ಎಂಥವರಿಗಾದರೂ ಪ್ರೀತಿ ಹುಟ್ಟಿಸಬಲ್ಲ ವಿಷಯ.

ಮಳಗಿ ಆಚಾರ್ಯರು ಒಂದು ರೀತಿಯಲ್ಲಿ ಪೇಜಾವರರಿಗೆ ಸಂಪರ್ಕಾಧಿಕಾರಿ ಇದ್ದಂತೆ; ಒಮ್ಮೊಮ್ಮೆ ಪಕ್ಕವಾದ್ಯ: ದುರಗ ಮುರಗಿ ಆಟದಲ್ಲಿ ಗಂಡ ಹೇಳಿದ್ದಕ್ಕೆಲ್ಲ 'ತಾನs ತಂದಾನ' ಅನ್ನುವ ಹೆಂಡತಿಯಂತೆ.

❁

ಸೋಮವಾರ (೧೯-೭-೯೩) ಸಂಜೆ ೪-೧೫ ರ ಸುಮಾರಿಗೆ ಪೇಜಾವರರನ್ನು ಕಾಣಲು ಹೋದವರು—ನಾನು ಮತ್ತು ಶಿವಾನಂದ ಶೆಟ್ಟರ. ನಮ್ಮ ವಿಶ್ವವಿದ್ಯಾಲಯದ ಗಾಂಧಿ ಅಧ್ಯಯನ ಕೇಂದ್ರದಲ್ಲಿ ಪ್ರಾಧ್ಯಾಪಕರಾಗಿರುವ ಶಿವಾನಂದ ಮೊದಲಿನಿಂದಲೂ ಬಂಡಾಯ ಸಾಹಿತ್ಯ ಸಂಘಟನೆಯಲ್ಲಿದ್ದವರು. ಗಾಂಧಿಯನ್ನು ನಡುಬೀದಿಯಲ್ಲಿ ನಿಲ್ಲಿಸಿ ಅನಾಥನನ್ನಾಗಿ ಮಾಡಿದ ನಡುಪಂಥೀಯ ಗಾಂಧೀವಾದಿಗಳೇ ತುಂಬಿರುವ ಈ ದೇಶದಲ್ಲಿ ಗಾಂಧಿಯನ್ನು ಒಬ್ಬ ಎಡಪಂಥೀಯನಾಗಿ ಜಾಗತಿಕ ಚರಿತ್ರೆಯ ಚೌಕಟ್ಟಿನಲ್ಲಿ ಅಭ್ಯಸಿಸುವ ಶಿವಾನಂದ ಅಂಥವರು ವಿರಳವೆಂದೇ ಹೇಳಬೇಕು.

ಮಾಳಮಡ್ಡಿಯಲ್ಲಿ ಕೃಷ್ಣ ದೇಶಪಾಂಡೆ ಅವರ ಮನೆ. ಕಾಂಪೌಂಡಿನಲ್ಲಿ ಒಂದು ಕಡೆ 'ಧರ್ಮೋ ರಕ್ಷತಿ ರಕ್ಷಿತ:' ಎಂಬ ದೊಡ್ಡ ಬ್ಯಾನರು. (ಧರ್ಮವನ್ನು ಯಾರು ರಕ್ಷಿಸುವರೋ ಅವರನ್ನು ಧರ್ಮ ರಕ್ಷಿಸುತ್ತದೆ-ಎಂಬ ಈ ಉಕ್ತಿ ಇಂಡಿಯಾದಲ್ಲಿ 'ಧರ್ಮ' ಮತ್ತು ಅದರ 'ರಕ್ಷಕ'ರ ಪರಸ್ಪರ ಒಪ್ಪಂದವನ್ನು ವಾಚ್ಯವಾಗಿಯೇ ಹೇಳುತ್ತದೆ. 'ಧರ್ಮ'ವನ್ನು ನೀವು ಕೈಬಿಟ್ಟರೆ ಅದೂ ಅತಂತ್ರ; ನೀವೂ ಅತಂತ್ರ!) ನಾವು ಹೋದಾಗ ಪೇಜಾವರರು ಒಳಗಿನ ಕೋಣೆಯಲ್ಲಿ ಪಾಠ ಮಾಡುತ್ತಿದ್ದರು—ವಟುಗಳಿಗೆ. ನಾವಿಬ್ಬರೂ ಬಂದ ಸಮಾಚಾರ ತಲುಪಿ ಪಾಠ ಮುಗಿಸಿ ನಮ್ಮನ್ನು ಒಳಗೆ ಕರೆದರು. ಮೂಲೆಯ ಒಂದು ಪಲ್ಲಂಗದ ಮೇಲೆ ಸ್ವಲ್ಪ ಕುಸಿದಂತೆ ಕುಳಿತವರೇ ಪೇಜಾವರರು ಅಂತ ಗೊತ್ತಾಯಿತು. (ಅವರನ್ನು ಇತ್ತೀಚೆಗೆ ಪೇಪರಿನ ಫೋಟೋದಲ್ಲಿ ತಕ್ಕಡಿಯ ಒಂದು ಪರಡಿಯಲ್ಲಿ ಕುಳಿತದ್ದು ನೋಡಿದ್ದೆ.) ಪರಿಚಯ ಆದೊಡನೆ ಅವರು ಕೈ ಮುಗಿದರು; ನಾನು ಕುಲುಕಲು ಕೈ ಚಾಚಿದೆ. ಸಂಕೋಚದಿಂದಲೇ ಕೈ ಕೊಟ್ಟರು. ನನ್ನಂಥ ರಾಕ್ಷಸನ ಸ್ಪರ್ಶದಿಂದ ಈ ಬ್ರಾಹ್ಮಣೋತ್ತಮ ಸಾಧ್ಯವಿದ್ದಷ್ಟೂ 'ಮೈಲಿಗೆ'ಯಾಗಲಿ- ಎಂಬುದು ನನ್ನ ಸುಪ್ತ ಪ್ರಜ್ಞೆಯ ಆಶಯವಾಗಿರಬಹುದೇ ಎಂದು ಈಗಲೂ ನನಗೆ ಅನ್ನಿಸುತ್ತದೆ.

ಸುತ್ತಲೂ ಕಣ್ಣಾಡಿಸಿದೆ. ಆ ಕಿರುಕೋಣೆಯಲ್ಲಿ ನಮ್ಮ ಸುತ್ತಲೂ ಎಲ್ಲ ವಟುಗಳು ಕಮಾಂಡೋಗಳಂತೆ ನಿಂತಿದ್ದಾರೆ — ನಮ್ಮ ಸಂವಾದದ ವರ್ತಮಾನವನ್ನು ವೀಕ್ಷಿಸುವ ಸಾಕ್ಷೀಭೂತಗಳಾಗಿ. ಎಲ್ಲರೂ ನಮ್ಮ ಮಳಗಿ ಆಚಾರ್ಯರ ಸಂಕ್ಷಿಪ್ತ ಆವೃತ್ತಿಗಳೇ. ಇಂಥ ವಾತಾವರಣದಲ್ಲಿ ಪ್ಯಾಂಟು-ಶರಟುಧಾರಿಗಳಾದ ನಾನು ಮತ್ತು ಶಿವಾನಂದ. ನಾವೇ "ಅಸಂಗತ" ಅಂತ ನಮಗನಿಸಿತು.

"ಕರ್ನಾಟಕದಲ್ಲಿ ಅನೇಕ ಜಾತಿಗಳಲ್ಲಿ ಅನೇಕ ಸ್ವಾಮಿಗಳು, ಜಗದ್ಗುರುಗಳು ಇದ್ದಾರೆ. ... ಆದರೆ ನಿಮ್ಮೊಂದಿಗೆ ಮಾತ್ರ ಯಾಕೆ ನಾವು ಸಂವಾದಕ್ಕೆ ಬಂದದ್ದೆಂದರೆ ನೀವು ಸಾಮಾಜಿಕ ಕಳಕಳಿ ಉಳ್ಳವರು"...ಎಂದು ಪ್ರಸ್ತಾರ ಹಾಕುತ್ತ ನಾನು, "ನಿಮ್ಮ 'ಸಮಾಜ'ದ ಪರಿಕಲ್ಪನೆ ಯಾವುದು ಅಂದರೆ... ಈ ದೇಶದ ಹಿಂದೂಗಳು..."

"ಅದರಲ್ಲೂ ಬ್ರಾಹ್ಮಣರು"-ಪೇಜಾವರರೇ ನಗುತ್ತ ಮುಂದುವರಿಸಿದರು.

"ಅದರಲ್ಲೂ ಮಾಧ್ವರು"-ನಾನೂ ಮುಂದುವರಿಸಿದೆ.

ನನಗಾದ ರೀತಿಯಲ್ಲೇ ಸುತ್ತಲೂ ಮುಕುರಿದ್ದ ವಟುಗಳಿಗೂ ಆಶ್ಚರ್ಯ. ಈ ಸ್ವಾಮಿ ಜೋಕು ಹೊಡೆಯಬಲ್ಲರು ಮತ್ತು ಹೊಡಿಸಿಕೊಳ್ಳಬಲ್ಲರು! ಹೀಗೆ ಸ್ನೇಹದ ನೆಲೆಯಿಂದಲೇ ಶುರುವಾದ ಮುಕ್ತವಾದ ಮಾತುಕತೆಯಲ್ಲಿ ತೇಲಿ ಬಂದವು ಅನೇಕ ವಿಷಯಗಳು. ಡಿಸೆಂಬರ ಆರರ ನಂತರದ ಅವಧಿಯಲ್ಲಿ ಕರ್ನಾಟಕದ ಅನೇಕ ವಲಯಗಳಿಂದ ಕಟುವಾದ ಟೀಕೆಗೆ ತುತ್ತಾದವರು ಪೇಜಾವರರು. ನಮ್ಮ ಚರ್ಚೆಯುದ್ದಕ್ಕೂ ಅವರು ಅಪರಾಧಿ ಸ್ಥಾನದ ಕಟಕಟೆಯಲ್ಲಿ ನಿಲ್ಲಿಸಲ್ಪಟ್ಟವರಂತೆ. ತಮ್ಮ ನಿಲುವನ್ನು ಸಮರ್ಥಿಸಿಕೊಳ್ಳುತ್ತಲೇ ನಮ್ಮಿಬ್ಬರನ್ನೂ ತಮ್ಮ ಮಾತಿನ ಜಾಲದಲ್ಲಿ ಕೆಡವಿಕೊಳ್ಳಲು ನಮುನಮೂನೆಯ 'ಪೇಚು'ಗಳನ್ನು ಪ್ರಯೋಗ ಮಾಡುತ್ತಲೇ ಇದ್ದರು.

'ವಿವಾದಿತ ಕಟ್ಟಡ'ಕ್ಕೆ ಕೈ ಹಚ್ಚುವುದಿಲ್ಲವೆಂದು ಹಿಂದಿನ ದಿನದ ವರೆಗೂ ಸಂಘ ಪ್ರಮುಖರು ಆಶ್ವಾಸನೆ ಕೊಟ್ಟಿದ್ದರೆಂದೂ, ಕರಸೇವೆ ಕೇವಲ ಸಾಂಕೇತಿಕವಾಗಿರುತ್ತದೆ ಎಂಬ ಭರವಸೆ ತಮಗಿತ್ತೆಂದೂ ಪೇಜಾವರ ಹೇಳಿದರು. ಮರುದಿನದ ಅಯೋಧ್ಯೆಯ ಪತ್ರಿಕೆಗಳಲ್ಲಿ ಕರಸೇವಕರ 'ಅತೃಪ್ತಿ'ಯ ಸ್ಫೋಟಕ ಪರಿಸ್ಥಿತಿಯ ವರದಿಯಾದಾಗ, "ನಾನು ಮೌನವಾಗಿದ್ದೆ; ತಟಸ್ಥವಾಗಿದ್ದೆ. ಯಾರೊಂದಿಗೂ ಮಾತಾಡಲಿಲ್ಲ." ಎಂದ ಪೇಜಾವರರು ನಮ್ಮಿಬ್ಬರ ಮುಖದಲ್ಲಿ ಮೆಚ್ಚುಗೆಯನ್ನು ಅಪೇಕ್ಷಿಸುತ್ತಿದ್ದಾಗಲೇ, ಮುಂದುವರಿದರು: "ಕಟ್ಟಡ ಕುಸಿದಾಗ ನೋಡುತ್ತೇವೆ-ಆದರೊಳಗಿಂದ ಹೊರಬರುತ್ತಿವೆ ಮೂರ್ತಿಗಳು. ಶಿವಲಿಂಗ, ಅದು, ಇದು..."

ನಾನು : 'ಇದೆಲ್ಲ ಕಾಗಕ್ಕ ಗುಬ್ಬಕ್ಕನ ಕತೆ ಆಯಿತು. ನೀವು ಹೇಳೋದನ್ನೆಲ್ಲ ನಾವು ನಂಬಲಿಕ್ಕೆ ಹತ್ತೀವಿ ಅಂತ ನಿಮಗೆ ಅನ್ನಿಸೇತೇನು ?'

ಸ್ವಾಮೀಜಿ ಜಾಗೃತರಾದರು. ಆದರೂ ತಮ್ಮ ಪಟ್ಟು ಬಿಡಲಿಲ್ಲ. ಬಾಬ್ರಿ ಮಸೀದೆಯನ್ನು (ಅವರು ಅದಕ್ಕೆ 'ವಿವಾದಿತ ಕಟ್ಟಡ'ವೆಂದೇ ಕರೆಯುತ್ತ ಹೋದರು.) ಧ್ವಂಸ ಮಾಡಿದ್ದರ ಬಗ್ಗೆ "ಅದು ತಪ್ಪು. ಆದರೆ ಸಣ್ಣ ತಪ್ಪು. ಗಾಂಧೀ ಹತ್ಯೆಯ ನಂತರದ ಮಹಾ ದುರಂತ ಅನ್ನುತ್ತಾರಲ್ಲ. ಅದು ಹಾಗಲ್ಲ. ಮಹಾ ಅಪರಾಧವೇನಲ್ಲ. ... ಅನಂತರ ದೇಶದಲ್ಲಿ ಸಾವಿರಾರು ಜನ ಸತ್ತದ್ದಕ್ಕೂ ಅಯೋಧ್ಯೆ ಘಟನೆಗೂ ಸಂಬಂಧವೇ ಇಲ್ಲ. ಎಲ್ಲಾ ಮುಸ್ಲಿಮರಿಂದಲೇ ಆಗಿದ್ದು. ಮುಂಬೈ ಸ್ಫೋಟಗಳು ಕೂಡ ಅವರಿಂದಲೇ....." ಇತ್ಯಾದಿ ಪ್ರವರ ಬಿಚ್ಚುವಾಗ—

ನಮ್ಮ ಮುಳಗಿ ಆಚಾರ್ಯರು: "ಅದೇನು ಬಿಡ್ರಿ. ಸ್ವಾತಂತ್ರ್ಯ ಆಂದೋಲನದಾಗ ಒಂದು ಪೋಸ್ಟ ಆಫೀಸು ಸ್ಟ್ಯಾಂಗ". ಅಂತ ನಡುವೆ ಒಂದು ಜವಾರಿ ಉಪಮೆ ಕೊಟ್ಟು ತಮ್ಮ ಜೋಕಿಗೆ ತಾವೇ ನಗತೊಡಗಿದರು.

•

ಮುಂದಿನ ದೃಶ್ಯದಲ್ಲಿ ಪೇಜಾವರರು ಹಿಂದೂ ಧರ್ಮದ ವಕ್ತಾರರಾಗಿ ವೇಷ ಹಾಕಿದ್ದರು. ಹಿಂದೂಗಳಿಗೆ ಇರುವುದು ಇದೊಂದೇ ದೇಶ, ಈಗ ಇಲ್ಲಿ ೧೨ ಕೋಟಿ ಮುಸ್ಲಿಮರಿದ್ದಾರೆ. ಅವರ ಸಂಖ್ಯೆ ಹೆಚ್ಚುತ್ತಲೇ ಇದೆ. ಮುಂದೆ ಈ ಭಾರತ ಮುಸ್ಲಿಂ ರಾಷ್ಟ್ರವೇ ಆಗುತ್ತದೆ.. ಇದು ಅವರ ಸರಣಿ. ಶಿವಾನಂದ ಶೆಟ್ಟರರು India Today ದ ಲೇಖನ ಉಲ್ಲೇಖಿಸಿ, "ಹಾಗಾಗುವುದು ೩೦೦ ವರ್ಷದ ನಂತರ ಮಾತ್ರ ಸಾಧ್ಯ" ಅಂದಾಗ, "ಅದನ್ನು ಈಗಿನಿಂದಲೇ ನಾವು ತಡೆಯಬಾರದೇ ?" ಅಂತ, ಮುಂದಿನ ಮೂರು ಶತಮಾನಗಳ ಅಗಾವು ಗುತ್ತಿಗೆದಾರರಂತೆ ಕಂಗೊಳಿಸಿದರು ಸ್ವಾಮೀಜಿ.

ಪೇಜಾವರರು 'ಹಿಂದೂ' ಅಂತ ಪ್ರಸ್ತಾಪ ಮಾಡಿದಾಗಲೆಲ್ಲ, "ಹಿಂದೂ ಮತ್ತು ವೀರಶೈವ ಸಂಸ್ಕೃತಿಗಳಲ್ಲಿ" ಅಂತಲೇ ಹೇಳುತ್ತಿದ್ದದ್ದು ಗಮನಾರ್ಹವಾಗಿತ್ತು. ನಾನು ಮತ್ತು ಶಿವಾನಂದ ಇಬ್ಬರೂ ವೀರಶೈವರೇ ಅಂತ ಅವರಿಗೆ ಗೊತ್ತಿದ್ದುದರಿಂದ ನಮ್ಮೊಳಗಿನ 'ಜಾತಿ'ಯ ತಂತಿಯನ್ನು ಅವರು ಮೀಟಲು ಪ್ರಯತ್ನಿಸುತ್ತಿದ್ದರು. ಅನೇಕ ಸನ್ನಿವೇಶಗಳಲ್ಲಿ ಅನೇಕ ವ್ಯಕ್ತಿಗಳಿಂದ ಈ ಒಳಗಿನ ಒಳಗಿನ ಕರುಳಿನ ತಂತಿಯನ್ನು ಮೀಟಿಸಿಕೊಂಡ ಅನುಭವ ನನ್ನದು. ಪೇಜಾವರ ತುಸು ನೀರಿನಲ್ಲಿ ಮುಳುಗುವ ಆಸಾಮಿಯಲ್ಲ ಅಂತ ಖಾತ್ರಿಯಾಯಿತು ನನಗೆ.

"ಹಿಂದೂ ಮತ್ತು ವೀರಶೈವ ಸಂಸ್ಕೃತಿಗಳಲ್ಲಿ ಉತ್ತಮ ಮೌಲ್ಯಗಳಿವೆ. ಉದಾ: ಮದ್ಯಪಾನ ವರ್ಜನೆ, ಸಸ್ಯಾಹಾರ ಸೇವನೆ..." ಪೇಜಾವರರ ಮಾತಿನ ಸೂತ್ರ ನಡುವೇ ಕತ್ತರಿಸಿ ಹೇಳಿದೆ: "ಇದೆಲ್ಲಾ ಸುಳ್ಳು ಬಿಡ್ರಿ. ಧಾರವಾಡದ ಯಾವುದೇ

ಬಾರಿನೊಳಗ ನೀವು ಬರ್ರಿ. ಅಲ್ಲಿ ಬರೇ ಲಿಂಗಾಯತರು, ಬ್ರಾಹ್ಮಣರು ಸಿಗ್ತಾರ ನೋಡ್ರಿ." ಅಂದಾಗ, ಪೇಜಾವರರ ಪಟು–ವೃಂದ ಒಕ್ಕೊರಲಿನಲ್ಲಿ ಹೌದ್ರಿ ಹೌದ್ರಿ ಎಂಬಂತೆ ನಕ್ಕಿದ್ದು ಒಂದು ಐತಿಹಾಸಿಕ ದಾಖಲೆಯೇ ಆಗಿತ್ತು. ನಾನು "ಬಾರು" ಎಂದದ್ದೇ ಆ ಬ್ರಾಹ್ಮಣೋತ್ತಮರಿಗೆ ಸೋಮರಸದ ನಿಶೆ ಏರಿಸಿತ್ತು; ಊರ್ವಶಿ ಮೇನಕೆ ರಂಭೆಯರೂ ಸುಳಿದಿರಬೇಕು.

ಜಾತಿ ಪದ್ಧತಿಯಿಂದ ಯಾವ ಹಾನಿಯೂ ಇಲ್ಲ. ಅಲ್ಪಸ್ವಲ್ಪ ದೋಷಗಳಿದ್ದರೂ ಕಾಲಕ್ರಮೇಣ ಅವೂ ಇಲ್ಲವಾಗುತ್ತವೆ. ಉತ್ತಮ ಜಾತಿಯವರಲ್ಲೂ ಮನ ಪರಿವರ್ತನೆಯಾಗುತ್ತಿದೆ...ಹೀಗೆ 'ಗಾಂಧಿ'ಯ ಹಾದಿ ಹಿಡಿದ ಪೇಜಾವರರಿಗೆ ಶಿವಾನಂದ ಸ್ಪಷ್ಟಪಡಿಸಿದರು: "ಹಿಂದುಗಳ ಹೃದಯ ಪರಿವರ್ತನೆ ಬಗ್ಗೆ ಗಾಂಧಿ ಹೇಳಿದಾಗ ಅಂಬೇಡ್ಕರ ಕಾದು ನೋಡಿದರು. ಆದರೂ ಕೊನೆಗೂ ಅವರಿಗೆ ಖಾತ್ರಿಯಾಯಿತು: ಅದು ಅಸಾಧ್ಯ ಮಾತು ಅಂತ."...ಚರ್ಚೆ ಮುಂದುವರಿಯಲಿಲ್ಲ.

●

ಬಹಿರಂಗ ಚರ್ಚೆಯ ಬಗ್ಗೆ ಉತ್ಸಾಹ ತೋರಿದ ಪೇಜಾವರರಿಗೆ ಸ್ಥಳ ಮತ್ತು ದಿನಾಂಕ ನಿಗದಿ ಮಾಡುವದಾಗಿ ಹೇಳಿದೆ. ಆಗ ಒಬ್ಬ ಶಿಷ್ಯರು, "ಗುರುಗಳ ವ್ಯಕ್ತಿತ್ವಕ್ಕೆ ಅಪಚಾರವಾಗಬಾರದು ನೋಡ್ರಿ" ಅಂದರು, "ಹಾಗಂದರೆ ಏನು ? ಅಂದೆ. "ಇಲ್ಲಾ...ಕುರ್ಚಿ ಹಾಕುವುದರಲ್ಲಿ..." ಅಂದರೆ. ನಾನು ಸ್ಪಷ್ಟಪಡಿಸಿದೆ: "ಇವರು ಅಲ್ಲಿ ಬರುವುದು ಭಾರತದ ಒಬ್ಬ ನಾಗರಿಕರಾಗಿ. ನಾವೆಲ್ಲ ಈ ದೇಶದ ನಾಗರಿಕರೆ. ಎಲ್ಲರಿಗೂ ಸಮಾನವಾದ ಕುರ್ಚಿಗಳೇ ಇರುತ್ತವೆ. ಯಾವುದೋ ಸ್ವಾಮೀಜಿ ಅಂದ ಮಾತ್ರಕ್ಕೆ ಮೂರು ಗೇಣು ಎತ್ತರದ ಆಸನ ಹಾಕೋದಿಲ್ಲ... ಮೂರು ಗೇಣು ಆಳದ ತೆಗ್ಗನ್ನೂ ತೆಗೆಯೋದಿಲ್ಲ."

ಪರಿಸ್ಥಿತಿಯ ಉದ್ರೇಕವನ್ನು ಪೇಜಾವರರೇ ಶಾಂತಗೊಳಿಸಿದರು. ಚರ್ಚೆಗೆ ಎಷ್ಟು ಜನ ? ಅಂತ ಕೇಳಿದಾಗ, 'ಆಸಕ್ತರೆಲ್ಲ ಬರುತ್ತಾರೆ' ಅಂದೆ. 'ಏನಾದರೂ ಗದ್ದಲ ?' ಅಂದಾಗ, "ಗದ್ದಲ ಆದರೆ ನಿಮ್ಮ ಚಡ್ಡಿಗಳಿಂದಲೇ ಆಗಬೇಕು." ಅಂತ ಜೋಕು ಹೊಡೆದೆ. "ನಾನು ಅವರನ್ನು ಕಂಟ್ರೋಲ್ ಮಾಡುತ್ತೇವೆ ಬಿಡ್ರಿ" ಅಂತ ದೇಶಪಾಂಡೆ ಹೇಳಿದರು.

●

ಪೇಜಾವರರು ಚರ್ಚೆಗೆ ಒಪ್ಪಿದ ಸಂಗತಿ. 'ಪ್ರಜಾವಾಣಿ'ಯಲ್ಲಿ ಸುದ್ದಿಯಾಗಿ ಪ್ರಕಟವಾಯಿತು. (ಜುಲೈ ೨೨) ವಿದ್ಯಾವರ್ಧಕ ಸಂಘದಲ್ಲಿ ಜುಲೈ ೩೧ ರಂದು ಶನಿವಾರ ಸಂಜೆ ಅಂತ ಕಾರ್ಯಕ್ರಮ ನಿಗದಿ ಮಾಡಿದೆ.

ಜುಲೈ ೨೨ ರ ಮುಂಜಾನೆ ೮–೩೦ ಕ್ಕೆ ಪೆಜಾವರರ ಫೋನು. ದನಿಯಲ್ಲಿ ಆತಂಕ. "ಚಂಪಾ ಅವರೆ, ನೀವು ಹೋದ ನಂತರ ನನ್ನ ಮೇಲೆ ವಿಪರೀತ ಒತ್ತಡ ಪ್ರಾರಂಭವಾಗಿದೆ. ಏನಾದರೂ ಸಂಭವಿಸಿಬಿಟ್ಟರೆ ಕೆಟ್ಟ ಹೆಸರು ನನಗೆ."... "ಹಾಗೇನೂ ಆಗಗೊಡುವುದಿಲ್ಲ ಬರ್‍ರಿ" ಅಂದೆ. "ಇಲ್ಲ, ಈ ಆರ್ ಎಸ್ ಎಸ್ ನವರಿಗೆ ತಾಳ್ಮೆ ಸಹಾನುಭೂತಿ ಕಡಿಮೆ. ನಮ್ಮ ಜನರ ಬಗ್ಗೆ ನನಗೇ ಭರವಸೆ ಇಲ್ಲ. ಮುನ್ನುಗ್ಗಿ ಹೋ ಅಂತ ಬೊಬ್ಬೆ ಹಾಕುತ್ತಾರೆ." ಅಂದರು. "ಅಂಥದೊಂದು ದೃಶ್ಯ ನೀವು ಈಗಾಗಲೇ ನೋಡಿದ್ದೀರಿ, ಅಲ್ಲವೇ ?" ಅಂದೆ. "ಅದು ಬೇರೆ ವಿಷಯ" ಅಂದರು.

ಪ್ರಜಾವಾಣಿಯಲ್ಲಿ ಸುದ್ದಿ ಬಂದ ವಿಷಯ ಅವರಿಗೆ ಗೊತ್ತಿರಲಿಲ್ಲ, ಹೇಳಿದೆ. "ಈಗೇನು ಮಾಡುವುದು ? ನನಗೆ ಒಂದು ದಿನ ಅವಕಾಶ ಕೊಡಿ." ಅಂದರು. ಒಂದು ದಿನದ ಬದಲಾಗಿ ಎರಡು ದಿನ ಧಾರಾಳವಾಗಿ ನೀಡಿದೆ. ಮತ್ತೆ ಜುಲೈ ೨೪ ರಂದು ಫೋನು ಮಾಡಿ ಫೈನಲ್ಲಾಗಿ ತಮ್ಮ ಅಸಹಾಯಕತೆ ವ್ಯಕ್ತ ಪಡಿಸಿದರು.

ಪೇಜಾವರರ ಆತ್ಮೀಯ ಪೇಚುಗಳನ್ನು ಕಣ್ಣಿಂದ ಕಂಡ ನನಗೆ ಅವರ ಪೇಚಾಟವನ್ನು ಅವರ ಬಾಯಿಂದಲೇ ನನ್ನ ಕಿವಿ ಮೂಲಕ ಕೇಳುವ ಅವಕಾಶ ಒದಗಿತು. 'ಪಾಪ' ಅನಿಸಿತು. ... 'ಪಾಪ' ಶಬ್ದಕ್ಕಿರುವ ಅನೇಕ ಅರ್ಥಗಳೂ ಮಿಂಚಿದವು. ●

---



---

## ಜಿ.ಕೆ. ರವೀಂದ್ರಕುಮಾರ

# ಸಿಕಾಡ*

೧

ನಿನ್ನ ಧ್ಯಾನದ ಅರಿವು ನಿನಗಿಹುದೇ ಸಿಕಾಡ?
ಹದಿನೇಳು ವರ್ಷಗಳ ಅಜ್ಞಾತ
ಕತ್ತಲ ಪ್ರಪಾತ
ಮಕೇಡಿ ಬದುಕ ಗೋಜಲಿಲ್ಲದೆ
ಗರ್ಭದಲಿ ಹುದುಗಿ
ಇಳೆಗೆ ಮುಗಿಯುದ ಸೀಮಂತ

ಕ್ಷಣಕ್ಷಣದ ಅಣುವಣುವಲ್ಲಿ
ದಿಗಂತದ ಬಣ್ಣ ಬದಲಾಗಿ
ನೂರು ಸೂರ್ಯರಾಗಿ
ಹುಣ್ಣಿಮೆಗಳು ಕುದ್ದು
ಚಂದ್ರರ ಶ್ರಾದ್ಧವಾಗಿ
ಹಸಿರು ಬಯಲಾಗಿ
ದಿಗಂಬರವಾಗಿ ದಿನವೆಂಬುದು
ಗುಂಗುರದ ಉಂಗುರವಾಗಿ
ಉಂಗುರದ ಬಿಗಿತವಾಗಿ
ಚಿಗಿತ ನಮ್ಮ ರಕ್ತದ ಬಿಂದು
ನಿನ್ನ ಧ್ಯಾನದ ಕಣವಾಗಿ
ಉದಿಸುವುದೆ ಬೆಂದು?

* ಸಿಕಾಡ, ಭೂಮಿಯೊಳಗೆ ಹದಿನೇಳು ವರ್ಷಗಳ ಕಾಲ ಪೊರೆಯೊಳಗೆ ಅಡಗಿದ್ದು ನಂತರ ಪೊರೆಯೊಡೆದು ಭೂಮಿಯ ಮೇಲೆ ಬಂದು ಕೇವಲ ಒಂದು ತಿಂಗಳು ಮಾತ್ರ ಬದುಕುವ ಒಂದು ವಿಶಿಷ್ಟ ಬಗೆಯ ಕೀಟ. ಸದಾ ಜೀಂವ್ ಎಂದು ಸದ್ದು ಮಾಡುವ ಇದರ ರೆಕ್ಕೆಯ ಬಡಿತದ ಧ್ವನಿ ಕತ್ತಲೆಯಲ್ಲಿ ನಮಗೆ ಸುಪರಿಚಿತ.

ಬಾಳಬಾಗಿನವೆಲ್ಲ ಬೂದಿಯಂಕಣವಾಗಿ
ಅಂಕಣದ ಅರಮನೆ ಸಾವಿನಾಕಳ ಗೊರಸಾಗಿ
ಗೊರಸುಗಳ ಉರುಸಲ್ಲಿ ಉಸಿರು ಕುಂವೆದ್ದು
ಜೀವ ಪರಿಸೆಯು ಮೆದ್ದು
ಹಗಲು ತೊಗಲಿನ ಉದಕವಾಗುವ ಕನಸು
ಕಾಣುತ್ತ ಕಾಯುತ್ತ ನಡುಗುತ್ತ
ಅಡಗಿಹೆಯಾ ಜೀವಬಿಂದು?
ನಿನ್ನ ತಾಯೊದೆಯು ತುಳಿವ ಹೆಜ್ಜೆಗಳು
ಗರಿಕೆ ಗಿಡ ತರಿದು ಮರ ಸವರಿ ಪಜ್ಜೆಯಾಗಿ
ಬತ್ತಲೆದೆಗೆದರಿ ಜಲಮೇದಂ ಶಿಲೆಮೇದಂ ಬುಡಮೇದು
ಉದುರಿಹೋಗುವ ಉಮೇದಿನಲಿ
ಬಣ್ಣವಾಗದ ಗೋತ್ರವಾಗದ ತಂತ್ರವಾಗದ
ಬುವಿಯ ಜಾತಕ ಹಿಡಿದು
ಹೊರಗೆದ್ದು ಬರುವೆಯಾ ಸಿಕಾಡ?

ಧ್ಯಾನ ವ್ಯವಧಾನದ ತೊತ್ತಾಗಿ
ತೊತ್ತು ಮಗುವಿನ ಅಳುವನಳಿಸದ ತುತ್ತಾಗಿ
ಒಣಗಿ ಕಲ್ಲಾಗಿ ಕಲ್ಲಕವಡೆಯಾಗಿ
ರಂಗ ಚದುರಂಗದ ದಾಳವಾಗಿ
ಗರದ ಗರ ಬಡಿದು ಸಡಗರಕೆ ಸೋಲಾಗಿ
ಬದುಕಂ ಬರೆ ಮೇಲೊಗರವಾಗಿರಲು
ತರುವೆಯಾ ನಿನ್ನ ತಪಸಿನಭಿಗಾರ?
ದಿಕ್ಕೆಟ್ಟ ಮುಖಗಳಿಗೆ ಮೂಗುದಾರ.

೨

ನಿನ್ನ ಮೌನದ ಯುಗವು ಉರುಳಿತೆಲ್ಲಿ?
ಈ ಸದ್ದು ಗದ್ದಲವೆ ಬದುಕಾಯಿತಿಲ್ಲಿ
ಜನಕಾಡ ಗೌಜಿನಲಿ ಅಡಗಿರುವೆ ಎಲ್ಲಿ?
ಕಾಡದಿರು ಸಿಕಾಡ
ಕಣ್ಣ ಮುಂದಿನ ನಿಗೂಢ

ನಿಬಿಡ ದಟ್ಟಣೆಯಲ್ಲಿ ಹುಡುಕಾಟವೊಂದು ಕಾಟ
ನಿನ್ನ ನಿಲ್ಲದ ಮಿಡುಕಾಟ
ನಮಗೆ ಶಬ್ದದ ಮಾಟ
ಗರ್ಭ ದಾಟಿದ ಒಡನೆ ಯಾಕೀ ವರಾತ!
ಬೇಡ ಆವೇಶ
ನಿನ್ನ ಸಾವಿಗಿಹುದು ಒಂದು ಮಾಸ

ಭೂಮಿಯೊಳಗಿನ ಮೌನ ಮಾತಾಗಿ ಜಿನುಗಿ
ಬೆಳಗು ಬೈಗಿನ ಪರಿವೆಯಿಲ್ಲದೆ
ನಿಲ್ಲಲೊಲ್ಲದೆ ಹರಿದು
ಕಿವಿಯ ತುಂಬಿದ ಭಾಷೆ
ತಿಳಿಯದ ತೊಗಸೆಯಾಗಿ
ಹುಣ್ಣ ನಾಲಿಗೆ ಮೇಲೆ ಅಗಿದ ಗಸಗಸೆಯಾಗಿ
ಕಾಡಿಹೆಯಾ ಸಿಕಾಡ?
ಅರಿವ ಮೀರಿದ ಅಗಾಧ

೩

ತಾಯ ಕಾಣದ ತಬ್ಬಲಿ
ಭೂಮಿಯನು ತಬ್ಬಿ
ಹದಿನೇಳು ಹೇಮಂತದಲಿ ಏನು ಕಂಡೆ?
ಹರಯ ಪ್ರಾಯದಿ ಬೆಳಕ ಹಿಡಿದು
ತಿಂಗಳೊಪ್ಪತ್ತಿನಲಿ ಬದುಕ ನಾದವನುಂಡೆ
ಹಿಡಿ ಬದುಕಿಗೇಕಿಂಥ ವಿಶಾಲ ಅಡಿಪಾಯ?
ಗುಡಿಸಲೇರುವ ಮೊದಲೆ ಮರೆಯಾಗುವ ಕಾಯ
ಏನಿದರ ಆದಾಯ
ತಿಳಿಯುವುದೆ ಸಂದಾಯ?

ಹೆತ್ತವರ ಮಡಿಲಲ್ಲಿ ಮಲಗಿ ಕಾಲು ಜಾಡಿಸಿ
ಹೆಗಲ ಆಧಾರದಲಿ ಹಗಲ ಎದುರಿಸಿ
ನಮ್ಮ ಲೋಕದ ಕನಸು ನಾವು ಕನಸುವುದರಲ್ಲಿ
ನಿನ್ನ ಕನಸುಗಳ ರಾಜ್ಯಭಾರ
ಹೂವಿಗೆ ಹೂವ ಜೋಡಿಸಿ

ದಿನ ಸವೆಸಿ ಮಾಲೆಯಾಗಿಸಿ
ಮುಡಿದೊಡನೆ ಬಾಡುವ
ಉಸಿರ ವ್ಯಾಪಾರ

೪

ನಮ್ಮೆದೆಯೊಳಗಿನ ಸಿಕಾಡಕ್ಕೆ
ಸದಾ ಅವರಿವರ ಕೈವಾಡ
ಸಂಯಮದ ಧ್ಯಾನಕ್ಕೆ ಗೊಂದಲದ ಕಡಿವಾಣ
ಕ್ಷಣಬದುಕ ಹಸಿವಿಗೆ ಸಿಗದ ಹರಿವಾಣ

ಧ್ಯಾನ ಕಾಣದ ಜ್ಞಾನ
ತವಕ ಕಾಣದ ಜತನ
ಕಾಯಲಾಗದ ಕಾಯ
ಮಾಯಲಾಗದ ಗಾಯ
ನಮ್ಮ ಅಧ್ಯಾಯ

ನಿನ್ನ ಧ್ಯಾನದ ಅರಿವು ನಮಗಿಹುದೇ ಸಿಕಾಡ?
ನಮ್ಮ ದಾರಿಯ ತಿಳುವು ನಮಗಿಹುದೇ ಸಿಕಾಡ?

# ತತ್ತ್ವಶಾಸ್ತ್ರದ ಮೇಲೆ ಧರ್ಮಶಾಸ್ತ್ರಕಾರರ ಹಿಡಿತ

## ದೇವೀಪ್ರಸಾದ ಚಟ್ಟೋಪಾಧ್ಯಾಯ

ಭಾರತದ ಭಾವನಾವಾದಿ ತತ್ತ್ವಶಾಸ್ತ್ರಜ್ಞರ ಪೈಕಿ ಮಹಾಯಾನ ಬೌದ್ಧರು ಕೂಡ ಧರ್ಮಶಾಸ್ತ್ರಕಾರರ ಕಟ್ಟಪ್ಪಣೆಗೆ ತಲೆಬಾಗುವುದರಲ್ಲಿ ಅತೀವ ಆಸಕ್ತಿ ತೋರಿದ್ದರು. ಆದರೆ ಹಾಗೆ ಮಾಡುವಾಗ ಅವರು ನೇರವಲ್ಲದ ಒಂದು ಸಂಕೀರ್ಣಮಾರ್ಗವನ್ನು ಹುಡುಕಿಕೊಂಡರು. ಅಂತಹ ಯುಕ್ತಿಯೊಂದನ್ನು ಅನುಸರಿಸದೆ ನೇರವಾಗಿ ಧರ್ಮಶಾಸ್ತ್ರಕಾರರ ಒತ್ತಡಕ್ಕೆ ಮಣಿದವರೆಂದರೆ ಅದ್ವೈತ ವೇದಾಂತಿಗಳು. ಅವರು ಎಷ್ಟರಮಟ್ಟಿಗೆ ತಮ್ಮ ಅಧೀನತೆಯನ್ನು ಪ್ರಕಟಿಸುತ್ತಾರೆಂದರೆ ಕಡೆಗೆ ಅವರು ಧರ್ಮಶಾಸ್ತ್ರಕಾರರ ಕಟ್ಟಾ ದಾಸರೇನೋ ಎನಿಸುತ್ತದೆ.

ಅದ್ವೈತ ವೇದಾಂತಿಗಳಲ್ಲಿ ಪ್ರಮುಖರಾದವರು ಶಂಕರರು. ತತ್ತ್ವಶಾಸ್ತ್ರಗ್ರಂಥಗಳಲ್ಲಿ ಅವರ ಮಹೋನ್ನತವಾದ ಕೃತಿಯು ಬ್ರಹ್ಮಸೂತ್ರದ ಮೇಲಿನ ಭಾಷ್ಯ. ಅದನ್ನೇ ವೇದಾಂತ ಭಾಷ್ಯ ಅಥವಾ ಶಾರೀರಕ ಭಾಷ್ಯ ಎನ್ನುವುದು. ಈ ಕೃತಿಯಲ್ಲಿ ಕಾಣಬರುವ ಅಂಶಗಳಿಂದ ಅದ್ವೈತ ವೇದಾಂತಿಗಳು ಧರ್ಮಶಾಸ್ತ್ರಗಳ ಬಗ್ಗೆ ಯಾವ ನಿಲುವನ್ನು ತಾಳುತ್ತಾರೆಂಬುದನ್ನು ತಿಳಿದುಕೊಳ್ಳಬಹುದು.

ಏನು ಆ ನಿಲುವು? ವಿಶೇಷತಃ, ಮನುವಿನ ಬಗ್ಗೆ ಶಂಕರರ ನಿಲುವೇನು? ಇದರಲ್ಲಿ ಸಂಶಯಕ್ಕೆ ಆಸ್ಪದವಿಲ್ಲದಂತೆ ತಮ್ಮ ನಿಲುವನ್ನು ಶಂಕರರು ಸ್ಪಷ್ಟಪಡಿಸಿದ್ದಾರೆ. ಬ್ರಹ್ಮಸೂತ್ರದ ಎರಡನೇ ಅಧ್ಯಾಯದ ಮೊದಲ ಸೂತ್ರದ ಮೇಲೆ ವ್ಯಾಖ್ಯಾನಿಸುತ್ತಾ "ಯದ್ವೈ ಕಿಂಚ ಮನುರವದತ್ ತದ್ಭೇಷಜಮ್" (ಮನು ಹೇಳಿರುವುದೆಲ್ಲಾ ಔಷಧ ಸಮಾನ) ಎಂಬ ವಾಕ್ಯವನ್ನು ತೈತ್ತಿರೀಯ ಸಂಹಿತೆಯಿಂದ ಉದ್ಧರಿಸಿದ್ದಾರೆ. ಈ ವಾಕ್ಯದ ಬಗ್ಗೆ ಚಕಾರವೆತ್ತುವಂತಿಲ್ಲ; ಏಕೆಂದರೆ ಅದು ಶ್ರುತಿವಾಕ್ಯ. –ಹೀಗಿದೆ ಅವರ ಘೋಷಣೆ.

ಈ ನಿಟ್ಟಿನಿಂದ ಅವರು ಬೆಳೆಸುವ ತರ್ಕ ಯಾವುದೇ ತತ್ತ್ವಶಾಸ್ತ್ರಜ್ಞನಿಂದ ನಾವು ನಿರೀಕ್ಷಿಸದಂತಹದ್ದು, ತತ್ತ್ವಶಾಸ್ತ್ರದ ಒಂದು ಧೋರಣೆಗೆ ಆಧಾರವಾಗಿ ಅವರು ಕೊಡುವುದು ಧರ್ಮಶಾಸ್ತ್ರಕಾರನೊಬ್ಬನ ಅಭಿಪ್ರಾಯವನ್ನು! ಒಂದು ನಿಲುವಿನ ಖಂಡನೆಗಾಗಲಿ ಮಂಡನೆಗಾಗಲಿ ಧರ್ಮಶಾಸ್ತ್ರಕಾರನೊಬ್ಬನ ಮಾತು ಹೇಗೆ ತಾನೆ ಆಧಾರವಾಗಬಲ್ಲದು? ಇದು ಶಂಕರರಿಗೆ ಅಳುಕನ್ನುಂಟು ಮಾಡುವುದಿಲ್ಲ. ಉದಾಹರಣೆಗೆ, ಕಪಿಲರ ಸಾಂಖ್ಯವಾದದ ಒಂದು ಅಂಶವನ್ನು ನಿರಾಕರಿಸಲು ಮನುವಿನ ಅಭಿಪ್ರಾಯವೊಂದನ್ನು ಬಲವಾದ ಒಂದು ವಾದವೆಂಬಂತೆ ಶಂಕರರು ಬಳಸಿಕೊಂಡಿದ್ದಾರೆ. ಅವರ ಮಾತು ಹೀಗಿದೆ: "ಮನುನಾ ಚ 'ಸರ್ವಭೂತೇಷು ಚಾತ್ಮಾನಂ ಸರ್ವ ಭೂತಾನಿ ಚಾತ್ಮನಿ; ಸಂಪಶ್ಯನ್ನಾತ್ಮಯಾಜೀ ವೈ ಸ್ವಾರಾಜ್ಯಮಧಿಗಚ್ಛತಿ' ಇತಿ ಸರ್ವಾತ್ಮತ್ವದರ್ಶನಂ ಪ್ರಶಂಸತಾ ಕಾಪಿಲಂ ಮತಂ ನಿಂದ್ಯತ ಇತಿ ಗಮ್ಯತೇ." ಕಪಿಲರು ವೇದವನ್ನು ಹಾಗೂ ವೇದಾನುಸಾರಿಯಾದ ಮನುವನ್ನು ತಿರಸ್ಕರಿಸುವುದರಿಂದ ತಾತ್ವಿಕ ನಿರೂಪಣೆಯಲ್ಲಿ ಮುಗ್ಗರಿಸಿದ್ದಾರೆಂಬುದು ಶಂಕರರ ಅಭಿಮತ. ಹೀಗೆನ್ನುವುದು ಆಶ್ಚರ್ಯಕರವಾಗಿದೆ. ಏಕೆಂದರೆ ಮನುವು ಒಬ್ಬ ತತ್ತ್ವಶಾಸ್ತ್ರಜ್ಞನೇ ಅಲ್ಲ: ಆದಾಗ್ಯೂ ಶಂಕರರ ಪ್ರಕಾರ ತತ್ತ್ವಶಾಸ್ತ್ರದ ಧೋರಣೆಯೊಂದರ ಮಾಪನಕ್ಕೆ ಧರ್ಮಶಾಸ್ತ್ರಕಾರ ಮನುವಿನ ಮಾತೇ ಅಂತಿಮ ಆಧಾರವಾಗಿದೆ!

ಹೀಗೆ ಶಂಕರರು ಧರ್ಮಶಾಸ್ತ್ರಕಾರರ ಮಾತುಗಳನ್ನು ತಮ್ಮ ವಾದಕ್ಕೆ ಆಧಾರವಾಗಿ ಉಲ್ಲೇಖಿಸುವ ಎಲ್ಲ ಪ್ರಸಂಗಗಳನ್ನೂ ಉದ್ಧರಿಸುವುದು ಅನವಶ್ಯಕ. ಮಹಾಮಹೋಪಾಧ್ಯಾಯ ಪಿ. ವಿ. ಕಾಣೆಯವರು ಹೇಳುವ ಮಾತನ್ನು ಗಮನಿಸಬಹುದು: "ವೇದಾಂತ ಭಾಷ್ಯದಲ್ಲಿ ಶಂಕರರು ಮನುವನ್ನು ಪದೇಪದೇ ಉದ್ಧರಿಸುತ್ತಾರೆ. ಬೃಹದಾರಣ್ಯಕಭಾಷ್ಯದಲ್ಲಿ ಹಲವು ಬಾರಿ ಮನುವಿನ ವಾಕ್ಯಗಳನ್ನು ಉದ್ಧರಿಸಲಾಗಿದೆ. ಶಂಕರರ ಪ್ರಕಾರ ವೇದಾಂತಸೂತ್ರದ ರಚನೆ ಮಾಡಿದವನು ಮನು ಸ್ಮೃತಿಯನ್ನು ಒಂದು ಆಧಾರವನ್ನಾಗಿ ಇಟ್ಟುಕೊಂಡಿದ್ದಾನೆ."

**ಶಂಕರರು ತುಚ್ಛೀಕರಿಸುವ ಬಗೆ:**

ತತ್ತ್ವಶಾಸ್ತ್ರಜ್ಞನಿಗೂ ಧರ್ಮಶಾಸ್ತ್ರಕಾರನಿಗೂ ಇಂತಹ ಐಕ್ಯಸಂಬಂಧ ಹೇಗೆ ಉಂಟಾಗುತ್ತದೆ? ಇದು ಮುಖ್ಯವಾದ ಪ್ರಶ್ನೆ. ಮನು ಕೇವಲ ನಡತೆಯ ನಿಯಮಗಳನ್ನು ಸೂಚಿಸುವವನಾಗಿದ್ದರೂ ಅವನಿಗೆ ತತ್ತ್ವಶಾಸ್ತ್ರದಲ್ಲಿ ಆಸಕ್ತಿ ಇದೆ. ಇದು ಗೌಣವಾದ ಆಸಕ್ತಿ ಇರಬಹುದು, ಆದರೆ ಅದು ಅಪ್ರಕೃತವಲ್ಲ. ಅವನು ದೃಷ್ಟಿಯಲ್ಲಿರಿಸಿಕೊಂಡಿರುವ ಆದರ್ಶ ಸಮಾಜದ ಭದ್ರತೆಗಾಗಿ ತತ್ತ್ವಶಾಸ್ತ್ರದ

ಯಾವುದೋ ಒಂದು ಧೋರಣೆಯು ಪೂರಕವೋ ಮಾರಕವೋ ಎಂಬುದು ಅವನ ಪ್ರಧಾನ ಆಸಕ್ತಿ. ಆದರೆ ಶಂಕರರು ಮೂಲತಃ ದಾರ್ಶನಿಕರು. "ಸತ್" ಎಂಬುದರ ಸರಿಯಾದ ಗ್ರಹಿಕೆಯೊಂದೇ ಅವರ ಆಸಕ್ತಿಯಾಗಿರಬೇಕು. ಹಾಗಿದ್ದರೆ ಮನುವಿಗೇಕೆ ಶರಣು ಹೋಗಬೇಕು? ಅದರ ಅಂತರಾರ್ಥವಾದರೂ ಏನು?

ಶಂಕರಾಚಾರ್ಯರ ನಮ್ಮ ಸಮಕಾಲೀನ ಅಭಿಮಾನಿಗಳಿಗೆ ಇಂತಹ ಪ್ರಶ್ನೆ ರುಚಿಸುವುದಿಲ್ಲ. ಹಾಗೆ ಪ್ರಶ್ನೆ ಎತ್ತುವವರು ಅವರ ಪ್ರಕಾರ ಧರ್ಮದಲ್ಲಿ ಶ್ರದ್ಧೆ ಇಲ್ಲದವರು. ಆದರೆ ಪ್ರಶ್ನೆ ಅನಿವಾರ್ಯ. ಏಕೆಂದರೆ ಶಂಕರರಿಗೂ ಒಂದು ರೀತಿಯ ಸಮಾಜಶಾಸ್ತ್ರದಲ್ಲಿ ಶ್ರದ್ಧೆಯಿದೆ. ಅದರಲ್ಲಿ ಮನುವಿನಲ್ಲಿರುವ ತುಚ್ಛ ಭಾವನೆಯ ಛಾಯೆ ಇದೆ. ಒಂದು ವರ್ಗದವರ ಬಗ್ಗೆ ಕೇವಲ ನಿಕೃಷ್ಟ ಭಾವನೆ ಇದೆ.

ಶಂಕರರ ಮಹತ್ವದ ಕೃತಿಯ ಹೊರಗೆ ಅವರ ಸಮಾಜಶಾಸ್ತ್ರದ ಚಿಂತನೆಯನ್ನು ನಾವು ಹುಡುಕಬೇಕಾಗಿಲ್ಲ. ಬ್ರಹ್ಮಸೂತ್ರಭಾಷ್ಯದಲ್ಲೇ ಅವರು ತಮ್ಮ ದಾರ್ಶನಿಕ ಮತ್ತು ಸಮಾಜಶಾಸ್ತ್ರೀಯ ಧೋರಣೆಗಳಿಗೆ ಪ್ರಬಲವಾದ ಅಭಿವ್ಯಕ್ತಿ ನೀಡಿದ್ದಾರೆ. ಆದ್ದರಿಂದ ದರ್ಶನ ಮತ್ತು ಸಮಾಜಶಾಸ್ತ್ರಗಳನ್ನು ಬೇರ್ಪಡಿಸುವುದು ಶಂಕರರ ಉದ್ದೇಶವಲ್ಲ. ಅವೆರಡಕ್ಕೂ ಪರಸ್ಪರ ಹೊಂದಿಕೆಯ ಸಂಬಂಧವಿದೆ. ಅವರ ಸಮಾಜಶಾಸ್ತ್ರದ ಧೋರಣೆಗೆ ಮೂಲ ನಮ್ಮ ಧರ್ಮಶಾಸ್ತ್ರಗ್ರಂಥಗಳು. ಅವುಗಳ ದೃಷ್ಟಿಯಲ್ಲಿ ಸಮಾಜವು ಎರಡು ಬಣಗಳನ್ನು ಹೊಂದಿದೆ. ಅವು ಯಾವುವೆಂದರೆ ದ್ವಿಜರು ಮತ್ತು ಶೂದ್ರರು. ಶಂಕರರು ತಮ್ಮೆಲ್ಲ ಕೃತಿಗಳಲ್ಲೂ ಒಪ್ಪುವ ಒಂದು ಮಾತು, ದ್ವಿಜರು ಸಹಜವಾಗಿಯೇ ಶೂದ್ರರಿಗಿಂತ ಶ್ರೇಷ್ಠರು ಎಂಬುದು. ಶೂದ್ರರ ಬಗೆಗಿನ ಅವರ ಅಭಿಪ್ರಾಯಗಳನ್ನು ನಾವು ವಿಶೇಷವಾಗಿ ಗಮನಿಸಬೇಕು. ಬ್ರಹ್ಮ ಸೂತ್ರಭಾಷ್ಯದ ಒಂದು ಇಡೀ ಭಾಗವನ್ನು ಇದರ ವಿವರಣೆಗೆ ಅವರು ಮೀಸಲಾಗಿಟ್ಟಿದ್ದಾರೆ.

ಅವರ ಮುಖ್ಯವಾದ ಇಂಗಿತ ಇದು: ಶಂಕರರು ಯಾವುದನ್ನು ದಾರ್ಶನಿಕ ದೃಷ್ಟಿ ಎಂದು ಪರಿಗಣಿಸುತ್ತಾರೋ ಅದನ್ನು ಹೊಂದಲು ಶೂದ್ರನು ಯೋಗ್ಯನಲ್ಲ. ಇದು ಅಷ್ಟೇನೂ ಗಮನಾರ್ಹವಾದ ಅಂಶವೆನಿಸದೆ ಹೋಗಬಹುದು. ಆದರೆ ಅದರ ಪರಿಣಾಮ ಹಾಗಲ್ಲ. ಅದು ಅತ್ಯಂತ ಗಂಭೀರವಾದುದು, ಘೋರವಾದುದು. ಶಂಕರರ ಪ್ರಕಾರ ಈ ದಾರ್ಶನಿಕ ದೃಷ್ಟಿಯಿಂದ ಮಾತ್ರವೇ ನಿಜವಾದ ಮುಕ್ತಿಯ ಸಾಧನೆ ಸಾಧ್ಯ. ಶೂದ್ರನಿಗೆ ಆ ದೃಷ್ಟಿಯನ್ನು ನಿರಾಕರಿಸುವುದೆಂದರೆ ಅವನಿಗೆ ಮೋಕ್ಷಪ್ರಾಪ್ತಿಯ ನಿರಾಕರಣೆಯೂ ಆಗುತ್ತದೆ. ಅಂದರೆ, ಅವನು ಸದಾ ಸಂಕೋಲೆ ಯಲ್ಲಿ ಅಥವಾ ಬಂಧನದಲ್ಲಿ ಉಳಿಯಬೇಕು. ಹೀಗೆ ನಿರಂತರವಾಗಿ ಬಂಧನದಲ್ಲಿದ್ದು

ಕೊಂಡು ಅವನು ದ್ವಿಜರ ಸೇವೆ ಮಾಡಬೇಕು. ಮನು ಮೊದಲೇ ಹೇಳಿದ್ದಂತೆ "ದ್ವಿಜರ ಸೇವೆಯನ್ನು ಮಾಡುವುದು ಬಿಟ್ಟು ಶೂದ್ರನು ಬೇರೇನು ಮಾಡಿದರೂ ಅದು ನಿರರ್ಥಕವಾಗುತ್ತದೆ."

'ಶೂದ್ರರಿಗೆ ದಾರ್ಶನಿಕ ಜ್ಞಾನದ ಹಕ್ಕು ಏಕಿಲ್ಲ? ಬ್ರಹ್ಮಸೂತ್ರ ೧-೩-೩೪ರ ಮೇಲಿನ ಭಾಷ್ಯದಲ್ಲಿ ಶಂಕರರು ನೀಡಿರುವ ಉತ್ತರ ಇದು: "ಶೂದ್ರರಿಗೆ ಅಂತಹ ಯಾವ ಹಕ್ಕೂ ಇಲ್ಲ. ಏಕೆಂದರೆ ಅವರು ವೇದಾಧ್ಯಯನ ಮಾಡುವಂತಿಲ್ಲ. ವೇದವನ್ನೋದಿ ಅದನ್ನು ಅರ್ಥಮಾಡಿಕೊಂಡಿರುವವನಿಗೆ ವೇದಾರ್ಥದಲ್ಲಿ ಪ್ರವೇಶವಿರುತ್ತದೆ. ವೇದಾಧ್ಯಯನಕ್ಕೆ ಪೂರ್ವಭಾವಿಯಾಗಿ ಉಪನಯನಕ್ಕೂ ಶೂದ್ರನು ಅರ್ಹನಲ್ಲವಾದ್ದರಿಂದ ಅವನಿಗೆ ವೇದಾಧ್ಯಯನವೆಲ್ಲಿಯದು? ಅದು ದ್ವಿಜರಿಗೆ ಮಾತ್ರ ಸೇರಿದೆ."

ಇದು ತತ್ತ್ವಶಾಸ್ತ್ರೀಯ ವಾದಕ್ಕಿಂತ ಹೆಚ್ಚಾಗಿ ಕೇವಲ ಹೇಳಿಕೆಗಳ ಸರಮಾಲೆಯಂತೆ ತೋರಬಹುದು. ಆದರೆ ಶಂಕರರಿಗೆ ಹಾಗೆನಿಸುವುದಿಲ್ಲ. ಏಕೆಂದರೆ ಧರ್ಮಶಾಸ್ತ್ರಕಾರರು ಹೇಳಿದ್ದಾರೆಂದರೆ ಅದು ಅವರಿಗೆ ಅಬಾಧಿತ ಸತ್ಯವಾಗಿ ಕಾಣುತ್ತದೆ. ಅವರೇ ಬ್ರಹ್ಮಸೂತ್ರ ೧-೩-೩೮ರ ಭಾಷ್ಯದಲ್ಲಿ ಹೇಳುವಂತೆ "ಶೂದ್ರರಿಗೆ ಸಂಸ್ಕಾರಗಳು ಇಲ್ಲವೆಂಬುದನ್ನು ಪದೇಪದೇ ಹೇಳಲಾಗಿದೆ. ಮನು(೧೦-೪) ಅವರನ್ನು ಏಕಜಾತಿಯವರೆನ್ನುತ್ತಾನೆ. (ಅಂದರೆ ಅವರು ದ್ವಿಜರಲ್ಲ ಎಂದರ್ಥ) ಇನ್ನೊಂದೆಡೆ ಮನು ಹೇಳುವುದು 'ನ ಶೂದ್ರೇ ಪಾತಕಂ ಕಿಂಚಿನ್ನ ಚ ಸಂಸ್ಕಾರಮರ್ಹತಿ', ಎಂದು".

ಇಷ್ಟೇ ಅಲ್ಲ. ಶಂಕರರು ಮುಂದುವರಿದು ಇನ್ನೂ ಹೇಳುತ್ತಾರೆ: "ಸ್ಮೃತಿಯಲ್ಲಿ ಶೂದ್ರನಿಗೆ ವೇದಾಧ್ಯಯನವಿರಲಿ, ವೇದ ಶ್ರವಣವೂ ಕೂಡದೆಂದು ಹೇಳಿದೆ. ಆದ್ದರಿಂದ ವೇದಾರ್ಥ ಮತ್ತು ವೈದಿಕ ಕ್ರಿಯೆಗಳು ಅವರಿಗೆ ನಿಷಿದ್ಧ. ಅವರಿಗೆ ವೇದಶ್ರವಣ ಸಲ್ಲದೆಂದು ಕೆಳಗಿನ ವಾಕ್ಯಗಳಲ್ಲಿ ಹೇಳಿದೆ.–'ವೇದಶ್ರವಣ ಮಾಡುವ ಶೂದ್ರನ ಕಿವಿಗೆ ಕರಗಿಸಿದ ಸೀಸ ಮತ್ತು ಅರಗು ತುಂಬಬೇಕು' (ಗೌತಮಧರ್ಮಸೂತ್ರ ೨-೩-೪). 'ಶೂದ್ರನು ಸ್ಮಶಾನ ಸದೃಶನಾದವನು, ಆದ್ದರಿಂದ ಶೂದ್ರನ ಸನಿಹದಲ್ಲಿ ವೇದ ಓದಬಾರದು, ಇದರಿಂದ ಶೂದ್ರನು ವೇದಾಧಿಕಾರ ಹೊಂದಿಲ್ಲವೆಂಬುದು ಸ್ಪಷ್ಟವಿದೆ. ಅವನ ಸನಿಹದಲ್ಲಿ ವೇದ ಓದಬಾರದೆಂದ ಮೇಲೆ ಇನ್ನು ಅವನೇ ವೇದ ಓದಲು ಹೇಗೆ ತಾನೆ ಶಕ್ಯ? ಅವನು ವೇದಾಧ್ಯಯನ ಮಾಡಕೂಡದೆಂಬ ಸ್ಪಷ್ಟವಾದ ವಿಧಿವಾಕ್ಯವೂ ಇದೆ. 'ವೇದೋಚ್ಚಾರಣೇ ಜಿಹ್ವಾಚ್ಛೇದೋ ಧಾರಣೇ ಶರೀರ ಭೇದ ಇತಿ.' (ಅವನು ವೇದವನ್ನು ಉಚ್ಚರಿಸಿದರೆ ಅವನ ನಾಲಿಗೆ

ಕತ್ತರಿಸಬೇಕು ವೇದವನ್ನು ಧಾರಣ ಮಾಡಿದರೆ, ಅರ್ಥಾತ್ ಮೈಗೂಡಿಸಿಕೊಂಡರೆ, ಅವನ ಶರೀರವನ್ನು ಕತ್ತರಿಸಬೇಕು), ವೇದಶ್ರವಣ ಮತ್ತು ವೇದಾಧ್ಯಯನದ ನಿಷೇಧವು ವೈದಿಕ ಕ್ರಿಯೆಗಳ ನಿಷೇಧವೂ ಆಗಿರುತ್ತದೆ. ಅದಕ್ಕೂ ಸ್ಪಷ್ಟವಾದ ವಿಧಿವಾಕ್ಯಗಳಿವೆ. ಉದಾಹರಣೆಗೆ, 'ನ ಶೂದ್ರಾಯ ಮತಿಂ ದದ್ಯಾತ್'' (ಶೂದ್ರನಿಗೆ ಜ್ಞಾನ ಕೊಡಕೂಡದು; ಮನು ೪-೮೦) ಮತ್ತು 'ದ್ವಿಜಾತೀನಾಂ ಅಧ್ಯಯನಮಿಜ್ಯಾ ದಾನಮ್' (ಅಧ್ಯಯನ ಯಜ್ಞಕ್ರಿಯೆ ಹಾಗೂ ದಾನಸ್ವೀಕಾರ ದ್ವಿಜರಿಗೆ ಸೇರಿದ್ದು; ಗೌತಮ ಧರ್ಮಸೂತ್ರ ೨-೧-೧)".

ಕಟ್ಟಾ ಅನಾಗರಿಕತೆಗೆ ಅಥವಾ ಬರ್ಬರತೆಗೆ ಶಂಕರರು ಉದ್ಧರಿಸಿರುವ ವಾಕ್ಯಗಳು ಪ್ರಾಚೀನ ಗ್ರೀಸ್ ಮತ್ತು ರೋಮ್‌ಗಳಲ್ಲಿನ ಗುಲಾಮಿ ಪದ್ಧತಿಯ ಪರವಾದ ಮಾತುಗಳಿಗಿಂತ ಹೆಚ್ಚು ಘೋರವಾಗಿವೆ. ಶಂಕರರ ಕೆಲವು ಆಧುನಿಕ ಅಭಿಮಾನಿಗಳು ಶಾಂಕರ ವೇದಾಂತದ ಮಾನವೀಯತೆಯ ಬಗ್ಗೆ ಉದ್ದುದ್ದದ ಲೇಖನಗಳನ್ನು ಬರೆಯುವುದರಿಂದ ಆಶ್ಚರ್ಯವೆನಿಸುತ್ತದೆ. ಸ್ವತಃ ಶಂಕರರೇ ಈ ಅಮಾನವೀಯ ನಿಯಮಗಳನ್ನು ಹುರುಪಿನಿಂದ ಉದ್ಧರಿಸಿರುವಾಗ ಲಕ್ಷೋಪಲಕ್ಷ ಶ್ರಮಜೀವಿಗಳ ಬಗ್ಗೆ ಅವರ ಅಸಹ್ಯವಾದ ನಿಲುವು ಗೋಚರವಾಗುವುದಿಲ್ಲವೆ ?

ಇನ್ನು ಕೆಲವು ಆಧುನಿಕ ಶಂಕರಾಭಿಮಾನಿಗಳು ಅವರನ್ನು ಪ್ಲೇಟೋವಿನೊಡನೆ ಹೋಲಿಸುವುದರಲಿ ಆಸಕ್ತಿ ತೋರುತ್ತಾರೆ. ಹೋಲಿಕೆಯೇನೋ ಖಂಡಿತವಾಗಿಯೂ ಸಾಕಷ್ಟಿದೆ; ಏಕೆಂದರೆ ಇಬ್ಬರೂ ಪ್ರಕೃತಿಯ ಸತ್ಯವನ್ನು ಅಲ್ಲಗಳೆದು ವಿಜ್ಞಾನದ ಬೆಳವಣಿಗೆಗೆ ಸೈದ್ಧಾಂತಿಕವಾದ ಅಡಚಣೆಯನ್ನು ಬಲವಾಗಿ ಒಡ್ಡುತ್ತಾರೆ. ಆದರೆ ಹೋಲಿಕೆ ಅಲ್ಲಿಗೇ ಮುಗಿಯುವುದಿಲ್ಲ. ಇಬ್ಬರ ಸಮಾಜ ಶಾಸ್ತ್ರೀಯ ದೃಷ್ಟಿಯಲ್ಲೂ ಬೇಕಾದಷ್ಟು ಸಮಾನಾಂಶಗಳಿವೆ. ಶಂಕರರು ಶ್ರಮಿಕ ಜೀವಿಗಳನ್ನು ಶೂದ್ರರೆಂದು ಗುರುತಿಸಿದ್ದರೆ ಪ್ಲೇಟೋ ಅವರನ್ನು ಗುಲಾಮರೆಂದು ಗುರುತಿಸಿದ್ದಾನೆ. ಅವರನ್ನು ಅತೀವ ನಿಕೃಷ್ಟರೆಂದು ಇಬ್ಬರೂ ಸಾಮಾನ್ಯವಾಗಿ ಬಣ್ಣಿಸಿದ್ದಾರೆ. ಫ್ಯಾರಿಂಗ್‌ಟನ್ ತನ್ನ "ಗ್ರೀಕ್ ಸೈನ್ಸ್"-ಎಂಬ ಪುಸ್ತಕದಲ್ಲಿ (I-೧೪೨) ಹೇಳುವಂತೆ, "ಗುಲಾಮಗಿರಿಯನ್ನು ಕುರಿತ ಉತ್ತರದ ಸಿದ್ಧಾಂತದಲ್ಲಿ ಗುಲಾಮನನ್ನು ಒಬ್ಬ ತರ್ಕಬುದ್ಧಿ ಇರುವ ಮನುಷ್ಯನೆಂದು ಗುರುತಿಸುವುದೇ ಇಲ್ಲ. ಯಜಮಾನನಿಗೆ ಮಾತ್ರ ತಾರ್ಕಿಕ ಮತಿ ಇತ್ತು. ಅವನ ನಿರ್ದೇಶನವನ್ನು ಚಾಚೂ ತಪ್ಪದೇ ಪಾಲಿಸಿದಾಗ ಗುಲಾಮನಲ್ಲೂ ಸ್ವಲ್ಪ ಮಟ್ಟಿನ 'ನೈಜ ಅಭಿಪ್ರಾಯ' ಮೂಡಬಹುದಿತ್ತು ಅಷ್ಟೇ. ಇಂತಹ ಯಜಮಾನ-ಗುಲಾಮ ಸಂದರ್ಭವು ಪ್ರತಿಯೊಂದು ಕ್ಷೇತ್ರದಲ್ಲೂ ಪ್ಲೇಟೋವಿಗೆ ಮೂಲಭೂತವಾದ ಸಂಬಂಧವೇ ಆಗಿದ್ದಿತು."

ಈ ಇಬ್ಬರು ತತ್ವಜ್ಞಾನಿಗಳ ಧೋರಣೆಗಳಿಂದ ನಮಗೆ ಸ್ಪಷ್ಟವಾಗುವ ಅಂಶವೇ ನೆಂದರೆ ಭೌತ ಪ್ರಪಂಚವನ್ನು ಸೈದ್ಧಾಂತಿಕವಾಗಿ ಅಲ್ಲಗಳೆಯುವುದಕ್ಕೂ ಶ್ರಮ ಜೀವಿಗಳನ್ನು ಸಾಮಾಜಿಕವಾಗಿ ನಿಕೃಷ್ಟವಾಗಿ ಕಾಣುವುದಕ್ಕೂ ಸಂಬಂಧವಿದೆ ಎಂಬುದು, ವರ್ಗಪ್ರಜ್ಞೆಯುಳ್ಳ ಆಧುನಿಕ ವಿಶ್ವದ ಶ್ರಮಿಕ ವರ್ಗವು ಇಂತಹ ದಾರ್ಶನಿಕ ದೃಷ್ಟಿಯನ್ನು ನುಚ್ಚುನೂರು ಮಾಡುತ್ತದೆಯೆಂಬುದೊಂದು ಚಾರಿತ್ರಿಕ ಸತ್ಯ. ಮಾನವನ ವಿಮೋಚನೆಯನ್ನು ಕುರಿತಂತೆ ವಿಶ್ಲೇಷಣೆ ನೀಡುತ್ತಾ ಬಹಳ ಹಿಂದೆಯೇ ಮಾರ್ಕ್ಸ್ ನುಡಿದಿದ್ದುದು ಇದು; "ಈ ವಿಮೋಚನೆಗೆ ಶಿರಸ್ಸು ತತ್ತ್ವ ಶಾಸ್ತ್ರವಾದರೆ, ಶ್ರಮಿಕ ವರ್ಗವು ಅದರ ಹೃದಯ. ಶ್ರಮಿಕವರ್ಗವು ಶೋಷಣೆಗೆ ಗುರಿಯಾಗಿರುವವರೆಗೂ ತತ್ತ್ವಶಾಸ್ತ್ರವು ತನ್ನ ನಿಜಾವಸ್ಥೆಯನ್ನು ತಾಳಲಾರದು ಮತ್ತು ತತ್ತ್ವಶಾಸ್ತ್ರವು ನೈಜವಾದ ರೀತಿಯಲ್ಲಿ ಅಸ್ತಿತ್ವಕ್ಕೆ ಬರುವವರೆಗೂ ಶ್ರಮಿಕ ವರ್ಗದ ವಿಮುಕ್ತಿ ಸಾಧ್ಯವಾಗಲಾರದು."

### ಶೂದ್ರನ ಬವಣೆ

ನಾವೀಗ ಶಂಕರರಲ್ಲಿಗೆ ಹಿಂದಿರುಗೋಣ. ಶೂದ್ರರನ್ನು ಚಲಿಸುವ ಸ್ಮಶಾನವೆಂದು ಖಂಡಿಸಿದ್ದು ಸಾಲದೆಂಬಂತೆ ಮುಂದುವರಿದು ಅವರು ಪ್ರತಿಪಾದಿಸುವುದೇನೆಂದರೆ 'ಶೂದ್ರ' ಎಂಬ ಪದದ ಮೂಲಾರ್ಥವೇ 'ಬವಣೆ' ಎಂದಾಗಿದೆಯೆಂಬುದನ್ನು, 'ಶೂದ್ರ' ಎಂದರೆ ಬವಣೆ; ಆದ್ದರಿಂದ ಬವಣೆಗೆ ಗುರಿಯಾದವನನ್ನು ಅಲಂಕಾರಿಕ ವಾಗಿ ಶೂದ್ರನೆಂದು ಕರೆಯುವುದು ವಾಡಿಕೆ. ಹೀಗೆ ಅವರು ಪ್ರತಿಪಾದಿಸುವುದು ಛಾಂದೋಗ್ಯ ಉಪನಿಷತ್ತಿನ ನಾಲ್ಕನೆಯ ಅಧ್ಯಾಯದಲ್ಲಿ ಬರುವ ಒಂದು ಕತೆಯ ಸಂದರ್ಭದಲ್ಲಿ. ಕತೆ ಸ್ಥೂಲವಾಗಿ ಹೀಗಿದೆ :

ಜಾನಶ್ರುತಿ ಪೌತ್ರಾಯಣನೆಂಬೊಬ್ಬ ಶ್ರೀಮಂತನಿದ್ದ. ಅವನು ದಾನಶೂರನಾ ಗಿದ್ದ. ಅದು ಅವನಿಗೆ ಹೆಮ್ಮೆಯ ವಿಷಯವೂ ಆಗಿತ್ತು. ಒಂದು ರಾತ್ರಿ ಕೆಲವು ಪಕ್ಷಿಗಳು ಹಾರುತ್ತಾ ಅವನನ್ನು ರೈಕ್ವನಿಗಿಂತಲೂ ಕಡಿಮೆಯವನೆಂದು ತಮ್ಮ ತಮ್ಮಲ್ಲೇ ಚರ್ಚಿಸುತ್ತಿದ್ದುವು. ರೈಕ್ವನೆಂಬುವನು ಒಂದು ಗಾಡಿಯ ಬಳಿ ಇರು ತ್ತಿದ್ದ ತತ್ತ್ವಜ್ಞಾನಿ. ಅವನನ್ನು ಹುಡುಕಲು ಜಾನಶ್ರುತಿ ತನ್ನ ಸೇವಕರನ್ನು ಅಟ್ಟಿದ. ಅಲ್ಲಿ ಇಲ್ಲಿ ಹುಡುಕಿ ಕಡೆಗೆ ಸೇವಕ ರೈಕ್ವನನ್ನ ಪತ್ತೆ ಮಾಡಿದ. ತನ್ನ ಗಾಡಿಯ ಅಡಿಯಲ್ಲಿ ಕೂತು ಮೈ ತುರಿಸಿಕೊಳ್ಳುತ್ತಿದ್ದ ಆ ರೈಕ್ವ. ನಂತರ ಜಾನಶ್ರುತಿಯೇ ಅವನ ಬಳಿಗೆ ಬಂದ. ಆರು ನೂರು ಗೋವು, ಒಂದು ಚಿನ್ನದ ಸರ ಮತ್ತು ಒಂದು ರಥವನ್ನು ಕೊಡುವುದಾಗಿ ಹೇಳಿ ಆ ತತ್ತ್ವಜ್ಞಾನಿಯ ರಹಸ್ಯ ಜ್ಞಾನಕ್ಕಾಗಿ ಬೇಡಿದ. ಗಾಡಿಯ ರೈಕ್ವ ಸಿಟ್ಟಿನಿಂದಲೇ ನಿರಾಕರಿಸಿದ. ಜಾನಶ್ರುತಿ ಒಂದು ಸಾವಿರ ಗೋವು, ಚಿನ್ನದ ಸರ, ರಥ ಹಾಗೂ ರೈಕ್ವನು ವಾಸಿಸುತ್ತಿದ್ದ ಊರು

ಮತ್ತು ಸ್ವತಃ ತನ್ನ ಮಗಳನ್ನು ಸಹ ಕೊಡುವುದಾಗಿ ಹೇಳಿ ಜ್ಞಾನಭಿಕ್ಷೆಗೆ ಯಾಚಿಸಿದ. ಆ ಯುವತಿಯ ಸುಂದರರೂಪ ತತ್ತ್ವಜ್ಞಾನಿಯ ಮನಸನ್ನು ಕರಗಿಸಿತು ಮತ್ತು ದಾನಿಗೆ ರಹಸ್ಯಜ್ಞಾನ ಉಪದೇಶಿಸಲು ರೈಕ್ವ ಒಪ್ಪಿಗೆ ನೀಡಿದ. ಉಪನಿಷತ್ತು ಹೇಳುವಂತೆ "ತಸ್ಯಾ ಹ ಮುಖಮುಪೋದ್ಗೃಹ್ಣನ್ನುವಾಚ ಆಜಹಾರೇಮಾಃ. ಶೂದ್ರಾನೇನೈವ ಮುಖೇನಾಲಾಪಯಿಷ್ಯಥಾ" (ಅವಳ ಮುಖವನ್ನು ತನ್ನೆಡೆಗೆ ತಿರುಗಿಸಿಕೊಂಡು ರೈಕ್ವ ಹೇಳಿದ: 'ಇಂತಹ ಒಳ್ಳೆಯ ವಸ್ತುವನ್ನು ದಾನ ಮಾಡಲು ತಂದಿದ್ದಾನಲ್ಲವೆ ! ಶೂದ್ರ, ಈ ಮುಖವೊಂದೇ ಸಾಕು ನನ್ನನ್ನು ಮಾತನಾಡುವಂತೆ ಮಾಡಲು').

ಇದು ಸ್ವಾರಸ್ಯವಾಗಿದೆಯಲ್ಲವೆ ? ಉಪನಿಷತ್ತಿನ ಒಬ್ಬ ಧೀಮಂತ, ಗಾಡಿಯ ಅಡಿಯಲ್ಲಿ ಕುಳಿತು ಮೈ ತುರಿಸಿಕೊಳ್ಳುವವ; ಆದರೆ ಒಬ್ಬ ಯುವತಿಯನ್ನು ಕೊಟ್ಟರೆ ರಹಸ್ಯಜ್ಞಾನ ಉಪದೇಶಿಸಲು ಮುಂದಾಗುತ್ತಾನೆ ! ಶಂಕರರಿಗೆ ಇದನ್ನು ಗಮನಿಸುವ ಆತುರವಿಲ್ಲ. ಅವರ ಖೇದಕ್ಕೆ ಬೇರೆಯೇ ಕಾರಣವಿದೆ. ಜಾನಶ್ರುತಿಯನ್ನು 'ಶೂದ್ರ'ನೆಂದು ಸಂಬೋಧಿಸಿರುವುದು ಅದು. ಜಾನಶ್ರುತಿಯು ಶೂದ್ರನಾಗಿದ್ದರೆ ಅವನಿಗೆ ಉಪನಿಷತ್ತಿನ ರಹಸ್ಯಜ್ಞಾನದ ಉಪದೇಶವು ಅಪರಾಧವಲ್ಲವೆ ! ಇದು ಹೇಗೆ ತಾನೆ ಸಾಧ್ಯ ? ಶೂದ್ರರಿಗೆ ಜ್ಞಾನದ ಅಧಿಕಾರ ಇಲ್ಲವೆಂಬ ಅವರ ಅಭಿಪ್ರಾಯವನ್ನು ಉಪನಿಷತ್ತುಗಳೇ ತಿರಸ್ಕರಿಸಿದರೆ ಹೇಗೆ ? ಇದಕ್ಕಿಂತಲೂ ನಿಂದ್ಯವಾದದ್ದು ಶಂಕರರ ಪ್ರಕಾರ ಇನ್ನೇನೂ ಇರಲಾರದು. ಆದ್ದರಿಂದ ಅವರು ಮಾಡುವ ಚಮತ್ಕಾರವೇನೆಂದರೆ ಈ ಸಂದರ್ಭದಲ್ಲಿ ಪ್ರಯೋಗಕ್ಕೆ ಬಂದಿರುವ 'ಶೂದ್ರ' ಎಂಬ ಪದಕ್ಕೆ ಬೇರೆಯೇ ಅರ್ಥವಿದೆಯೆಂದು ಸಾಧಿಸುವುದು. ಆ ಪದವು ಅಲಂಕಾರಿಕವಾಗಿ ಇಲ್ಲಿ 'ನೊಂದವನು' ಎಂಬರ್ಥ ಹೊಂದಿದೆಯಂತೆ. ಅದೇ 'ಶೂದ್ರ' ಎಂಬ ಪದದ ವ್ಯುತ್ಪತ್ತಿ ಅರ್ಥವೆಂದು ಅವರು ನಿರೂಪಿಸುತ್ತಾರೆ.

ಅಪಶೂದ್ರಾಧಿಕರಣವೆಂದು ಕರೆಯಲಾಗಿರುವ ಬ್ರಹ್ಮಸೂತ್ರದ ಈ ಭಾಗದಲ್ಲಿ ಸೂತ್ರ (೧-೩-೩೪) ಹೀಗಿದೆ; 'ಶುಗಸ್ಯ ತದನಾದರ ಶ್ರವಣಾತ್ತದಾದ್ರವಣಾತ್ ಸೂಚ್ಯತೇ ಹಿ.' ಇದರ ಮೇಲಿನ ಶಂಕರರ ಭಾಷ್ಯ ಭಾಗಶಃ ಇದು: ಶಕ್ಯತೇ ಚಾಯಂ ಶೂದ್ರ ಶಬ್ದಃ ಅಧಿಕೃತ ವಿಷಯೋ ಯೋಜಯಿತುಮ್ ! ಕಥಮಿತ್ಯುಚ್ಯತೇ– 'ಕಂವರ ಏನ ಮೇತತ್ಸಂತಂ ಸಯುಗ್ವಾನಮಿವ ರೈಕ್ವಮಾತ್ಥ' (ಛಾಂದೋಗ್ಯ ೪-೧-೩) ಇತ್ಯಸ್ಮಾತ್ ಹಂಸವಾಕ್ಯಾತ್ ಆತ್ಮನೋ ಅನಾದರಂ ಶ್ರುತವತೋ ಜಾನಶ್ರುತೇಃ ಪೌತ್ರಾಯಣಸ್ಯ ಶುಗುತ್ಪೇದೇ, ತಾಮೃಷೀ ರೈಕ್ವಃ ಶೂದ್ರಶಬ್ದೇನಾನೇನ ಸೂಚಯಾಂಬಭೂವಾತ್ಮನಃ 'ಪರೋಕ್ಷಜ್ಞತಾಖ್ಯಾಪನಾಯ' ಇತಿ ಗಮ್ಯತೇ ! ಜಾತಿ

ಶೂದ್ರಸ್ಯ ಅನಧಿಕಾರಾತ್ ! ಕಥಂ ಪುನಃ ಶೂದ್ರ ಶಬ್ದೇನ ಶುಗುತ್ಪನ್ನಾ ಸೂಚ್ಯತ ಇತಿ ? ಉಚ್ಯತೇತದಾದ್ರವಣಾತ್ ! ಶುಚಮಭಿದುದ್ರಾವ, ಶುಚಾ ವಾ ಅಭಿದು ದ್ರುವೇ, ಶುಚಾ ವಾ ರೈಕ್ವಮಭಿದುದ್ರಾವ ಇತಿ ಶೂದ್ರಃ ! ಅವಯುವಾರ್ಥಸಂಭ ವಾತ್ ರೂಢ್ಯರ್ಥಸ್ಯ ಚ ಅಸಂಭವಾತ್ ! ದೃಶ್ಯತೇ ಚಾಯುಮರ್ಥಃ ಆಸ್ಯಾ ಮಾಖ್ಯಾಯಿಕಾಯಾಂ॥ (ಶೂದ್ರ ಶಬ್ದವು ಅದು ಬಂದಿರುವ ಸಂದರ್ಭದಲ್ಲಿ ಬೇರೊಂದು ರೀತಿಯಲ್ಲಿ ಯೋಜಿತಗೊಳ್ಳಬಹುದು. ಹೇಗೆ ? ಜಾನಶ್ರುತಿ ಪೌತ್ರಾ ಯಣನು ತನ್ನ ಬಗ್ಗೆ ಪಕ್ಷಿಗಳು ಅನಾದರದಿಂದ ಮಾತನಾಡಿಕೊಳ್ಳುತ್ತಿದ್ದುದನು ಕೇಳಿ ತನ್ನೊಳಗೆ ಬಹುವಾಗಿ ನೊಂದುಕೊಂಡ. 'ಶುಕ್' ಎಂದರೆ 'ಶೋಕ' ಅರ್ಥಾತ್, ಅವನು ಶೋಕಗೊಂಡ. ಹೀಗೆ ನೊಂದುಕೊಂಡಿದ್ದುದನ್ನು ಗಮನದ ಲ್ಲಿರಿಸಿ ರೈಕ್ವನು ಅವನನ್ನು ಶೂದ್ರಶಬ್ದದಿಂದ ಸಂಬೋಧಿಸಿದ. ತನಗೆ ಪರೋಕ್ಷ ಜ್ಞಾನದ ಸಾಕ್ಷಾತ್ಕಾರವಾಗಿದೆಯೆಂಬುದನ್ನೂ ಇದರಿಂದ ಅವನು ಸೂಚಿಸಿದ. ಅಂದರೆ, ಅವನಿಲ್ಲದ ಕಡೆ ಪಕ್ಷಿಗಳು ಮಾತನಾಡಿಕೊಂಡಿದ್ದು, ಅದರಿಂದ ಜಾನಶ್ರುತಿ ನೊಂದುಕೊಂಡದ್ದು. ಎಲ್ಲಾ ರೈಕ್ವನಿಗೆ ತಾನಿದ್ದಲ್ಲಿಂದಲೇ ಗೊತ್ತಾಗಿಬಿಟ್ಟಿತ್ತು. ಈ ಅನ್ವಯಾರ್ಥವನ್ನು ನಾವು ಸ್ವೀಕರಿಸಬೇಕು. ಏಕೆಂದರೆ, ಜಾತಿಯಲ್ಲಿ ಶೂದ್ರನಾದವ ನಿಗೆ ಉಪನಿಷತ್ತಿನ ಜ್ಞಾನ ಭೋಗ್ಯವಲ್ಲ. ಜಾನಶ್ರುತಿಯು ನೊಂದುಕೊಂಡಿದ್ದು ದನ್ನು ಶೂದ್ರ ಶಬ್ದದಿಂದ ಹೇಗೆ ಸೂಚಿಸಲು ಸಾಧ್ಯವೆಂಬ ಪ್ರಶ್ನೆ ಏಳಬಹುದು. ಅದಕ್ಕೆ ನಮ್ಮ ಸಮಾಧಾನ ಇದು: ನೊಂದುಕೊಳ್ಳುವಿಕೆಯು ಉಕ್ಕಿ ಹರಿದದ್ದು (ಆದ್ರವಣ) ಇದರಿಂದ ಸೂಚಿತವಾಗಿದೆ. ಶೂದ್ರಶಬ್ದದ ವ್ಯುತ್ಪತ್ತಿಯನ್ನು ಎರಡು ವಿಧಗಳಲ್ಲಿ ವಿಭಾಗಿಸಿ ಹೇಳಬಹುದು: ಅವನು ಶೋಕದೊಳಗೆ ಮುಳುಗಿ ಹೋದ; ಅಥವಾ 'ಶೋಕವು ಅವನನ್ನಾವರಿಸಿತು' ಮತ್ತು ಆಗ ಅವನು ರೈಕ್ವನಲ್ಲಿಗೆ ಹೋದ, ಹೀಗೆ ಶೂದ್ರಪದ ಪ್ರಯೋಗವು ಇಲ್ಲಿ ರೂಢ್ಯರ್ಥದಲ್ಲಿ ತೆಗೆದುಕೊಳ್ಳಲು ಬರುವುದಿಲ್ಲ; ಆದರೆ ಅವಯವಾರ್ಥವು ಸಮಂಜಸವಾಗುತ್ತದೆ).

ಸಂಗ್ರಹಾನುವಾದ : **ಡಾ|| ಜಿ. ರಾಮಕೃಷ್ಣ**

**ಅನುವಾದಕರ ಟಿಪ್ಪಣಿ:** ಇದರ ಸಾರಾಂಶವಿಷ್ಟೆ: ತತ್ತ್ವಶಾಸ್ತ್ರದ ಪರಿಧಿಯಲ್ಲಿ ಬರುವ ಚರ್ಚೆಗೆ ಧರ್ಮಶಾಸ್ತ್ರಕಾರರ ತೀರ್ಮಾನಗಳೇ ಮಾರ್ಗದರ್ಶಕ ಸೂತ್ರಗಳು. ಶಂಕರರಂತಹ ವಾದಪಟುಗಳು ಕೂಡ ಈ ಧರ್ಮಶಾಸ್ತ್ರಕಾರರ ನಿರ್ದೇಶನವನ್ನು ಮೀರಿ ನಿಲ್ಲಲಿಲ್ಲ. ಏಕೆಂದರೆ ಅವರ ಸಮಾಜಶಾಸ್ತ್ರ ದೃಷ್ಟಿಯು ಮನುವಿನ ದೃಷ್ಟಿಯಿಂದ ಭಿನ್ನವಾಗಿರಲಿಲ್ಲ. ಆ ದೃಷ್ಟಿಗೆ ಬೆಂಬಲವಾಗಿ ಅವರು ತತ್ತ್ವಶಾಸ್ತ್ರ ಪ್ರಣಾಲಿಕೆಯನ್ನು ಬೆಳೆಸುತ್ತಾರೆ. ಅವರ ಸಮಾಜಶಾಸ್ತ್ರ ಮತ್ತು ತತ್ತ್ವಶಾಸ್ತ್ರಗಳು ಅವಿನಾಭಾವ ಸಂಬಂಧವನ್ನು ಹೊಂದಿವೆ. ಇದನ್ನು ಅರಿಯದೆ ಶಂಕರರಂತಹ ಅಥವಾ ಪ್ಲೇಟೊನಂತಹವರ ತಾತ್ವಿಕ ಧೋರಣೆ ಮತ್ತು ಶ್ರದ್ಧೆಗಳನ್ನು ಅಳೆಯಹೊರಡುವುದು ಅಸಂಗತವಾಗುತ್ತದೆ. ಶೂದ್ರನು 'ನೊಂದುಕೊಂಡವನು' ಎಂಬ

ವ್ಯುತ್ಪತ್ತಿಯಿಂದ ಶೂದ್ರನಿಗೆ ಸಮಾಧಾನವೇನೂ ಉಂಟಾಗಲಾರದು, ನೊಂದುಕೊಳ್ಳುವಂತಹ ಪರಿಸ್ಥಿತಿಯನ್ನು ದೂರಮಾಡುವ ತತ್ತ್ವಶಾಸ್ತ್ರದ ಅಗತ್ಯ ನಮಗಿದೆ. ಮನುವಿನ ದೃಷ್ಟಿಯಲ್ಲಿ ಶೂದ್ರನಿಗೆ ಬಹುವಿಧಗಳಲ್ಲಿ ಸಮಾನಳಾದವಳು ಮಹಿಳೆ. ಆದ್ದರಿಂದ ಅವನಿಗೆ ಅನ್ವಯವಾಗುವ ಅನೇಕ ವಿಧಿಗಳು ನಿಯಮಗಳು ಅವಳಿಗೂ ಅನ್ವಯವಾಗುತ್ತವೆ. ಹಾಗಿದ್ದರೆ ಅವರಿಬ್ಬರೂ ಆಶುಕೊಳ್ಳಬೇಕಾದ ಸಮಾಜಶಾಸ್ತ್ರ ಮತ್ತು ತತ್ತ್ವಶಾಸ್ತ್ರಗಳ ಬಗೆಗಿನ ವಿವೋಚನೆ ಅತ್ಯಗತ್ಯ ವಾಗಿದೆಯಲ್ಲವೆ?

ಕೃಪೆ: ಅಚಲ ದ್ವೈಮಾಸಿಕ, ಜುಲೈ ೮–೧೯೯೩

## ಎಂ. ಎಚ್. ಲಕ್ಷ್ಮೀನರಸಮ್ಮ

# ದಿಕ್ಕು

ಎಲ್‌ಕೇಜಿ ಓದುವ ಸುಧಾಮಣಿ
ಆಡುತ್ತಾ ಆಡುತ್ತಾ ಕೂಸುಮಣಿ
ಅಮ್ಮನನ್ನು ಕೇಳಿತು ಈ ಪರಿ:
'ಪೂರ್ವದಿಕ್ಕು ಯಾವುದು? ಪಶ್ಚಿಮ ಯಾವುದು?'

ಕಟ್ಟಡಗಳ ಕಾಡಿನಲ್ಲಿ
ಪಟ್ಟಣದ ಗೂಡಿನಲ್ಲಿ
ದಿಕ್ಕುಕಾಣದಿದ್ದ ಅಮ್ಮ ಕಕ್ಕಬಿಕ್ಕಿಯಾದಳು.
ಬೆಳಗಿನಲ್ಲಿ ಆಫೀಸು, ಸಂಜೆ ಮನೆಯ ಕಡೆಗೆ ಓಟ.
'ಮಗೂ, ಆಫೀಸೇ ಪೂರ್ವ ದಿಕ್ಕು
ಮನೆ ಪಶ್ಚಿಮ', ಎಂದಳು.

## ಬಿ. ಚಿನ್ನಸ್ವಾಮಿ

# ಕಾಲಧರ್ಮ

ಎಂಟುಮೊಳದ ಸೀರೆಯ ನೆರಿಗೆ ನೀವರಿಸಿ
ಸೆರಗು ಸರಿಪಡಿಸಿ ಪತಿಯ ಕಾಲ-ಮುಟ್ಟಿ ಕಣ್ಣಿಗೊಪ್ಪಿಸಿ.
ಜಡನಿದ್ದೆಗೆ ಮೊದಲ ಘಂಟೆ ಬಾರಿಸಿ,
ಸ್ನಾನಾದಿಗಳಿಂದ, ಪುಷ್ಪ ಸುಗಂಧವತಿಯರಾಗಿ
ಮುಂಬಾಗಿಲಿಗೆ ರಂಗವಲ್ಲಿಯಿಟ್ಟು
ತುಳಸಿ ಪೂಜಿಸಿ, ಮಂಗಳಾರತಿಯೊಂದಿಗೆ
ಬೆಳಗಾಗಿಸುವ ಕಾಲವನ್ನು ಮರೆತುಬಿಡಿ—
ಇವರನ್ನು ಸಂಪ್ರದಾಯದವರೆನ್ನಿ—ಇಲ್ಲ
ನವೋದಯದವರೆನ್ನಿ.

ನೈಟಿಯ ಜಿಪ್ಪುಗಳನ್ನು ಮೇಲೆಳೆಯುತ್ತಾ
ಕಾಲಿನಿಂದ ಕಾಲು ಸವರಿ, ತುಟಿಗೆ
ತುಟಿಯಿಡುತ್ತಾ, ಪ್ರೀತಿಯ ಪರದೆಯೊಳಗೆ
ಗುಡ್‌ಮಾರ್ನಿಂಗನ್ನು ಕಿವಿಯೊಳಗುಸುರಿ
ಕೂದಲೊಳಗೆ ಬೆರಳಾಡಿಸಿ ಅಲಾರಮ್ ಕೊಟ್ಟು
ಸೂರ್ಯೋದಯದ ಚೇತೋಹಾರಿ ಕಾಫಿಯೊಂದಿಗೆ
ಬೆಡ್ಡಿಗೆ ಪೇಪರು ಹಿಡಿದು ಅತಿ
ನಯವಾಗಿ ಬೆಳಗಾಗಿಸುವ ಕಾಲ—ಇವರನ್ನು

ಬೇಕಾದರೆ ನವ್ಯರೆನ್ನಿ.
ತೆರೆದ ಕಿಟಕಿಯ ಬಿಸಿಲಕೋಲುಗಳು
ರೆಪ್ಪೆಗೆ ರಪರಪ ಬಡಿದರೂ
ಬಡಪೆಟ್ಟಿಗೆ ಬೆಡ್ಡು ಬಿಡದ, ಬಿಡುಕಾಫಿ
ತಣ್ಣಗಾಗುವವುದೆಂದು ಬಡಬಡಿಸುವ ಗಂಡ
ಕಛೇರಿಗನುವಾಗುವಾಗಲೇ 'ಮಗುವಿಗೂ
ಸ್ನಾನ ಮಾಡಿಸ್ರಿ' ಎಂದು ಗೊಣಗುಡುವ ಪಕ್ಕದ
ಐಯ್ಯರ್ ಕೆಫೆಯಿಂದ ಬಿಸಿಬಿಸಿ ಟಿಫಿನ್‌ಗೆ
ಆರ್ಡರ್ ಮಾಡುವ ಹಾಸಿಗೆಯಿಂದಲೇ ಬೈ ಬೈ

ಹೇಳುವ ವಿಮೆನ್ನು ಲಿಬ್ಬರುಗಳ ಸಂಘದ
ಸಪಸ್ಯೆಯೂ ಆಗಿರಬಹುದಾದ ಈ ಇಂಥವರನ್ನು
ಬಂಡಾಯದವರೆನ್ನಿ ಅಥವಾ ದಲಿತರೆಂದು
ಅನುಕಂಪಿಸಿ—ಬಿಡಿ.

## ವಿಡಂಬಾರಿ

# ನಾಲ್ಕು ಚುಟುಕಗಳು

### ೧. ಸೋಗು

ಹಿಂದುಗಳು ಎಲ್ಲರೂ ಒಂದೆಂಬ ಕೂಗು
ಈಗಿತ್ತ ಕೇಳುತಿದೆ ಇದು ಖುರ್ಚಿ ಸೋಗು
ಕೀಳು ಜನ ಅನ್ನುತ್ತ ದೂರವೇ ಇಟ್ಟು
ಮಲವನ್ನೆ ಹೊರಿಸಿದ್ದು ನೀವಲ್ವೆ ಮತ್ತು?

### ೨. ನಿರುದ್ಯೋಗ ನಿವಾರಣೆ

ಅವರೊಮ್ಮೆ ಅಧಿಕಾರ ಗದ್ದುಗೆಯ ಏರಿ
ಕುಳಿತೊಡನೆ ನಿರುದ್ಯೋಗ ಪೂರ್ಣ ಪರಾರಿ
ಕಾರಣವು ಸುಸ್ಪಷ್ಟ ಹಲವಾರು ವರುಷ
ದುಡಿದರೂ ಮುಗಿಯದ್ದೆ ಕರಸೇವೆ ಕೆಲಸ

### ೩. ಬಡತನ ನಿವಾರಣೆ

ಮನೆಗೊಂದು ದೇವಗುಡಿ ಕಟ್ಟುತ್ತ ನೋಡಿ
ಆ ಮನೆಯ ಮುಖ್ಯನಿಗೆ ಪೂಜಾರಿ ಮಾಡಿ
ಆಮೇಲೆ ಅಖಂಡ ಭಜನೆಯನು ಕೂಡಿ
ಮಾಡಿದರೆ ಬಡತನವು ಹೋಗುವುದು ಓಡಿ

### ೪. ದೋಷ ಅನಕದಲ್ಲ

ಖಾದಿ ಅಂಗಿಗೆ ರಾಡಿ ಅಂಟಿದುದ ಕಂಡೆ
ಬಿಳಿಅರಿವೆ ಜಾತಿಯೇ ಹೀಗೆಂದುಕಂಡೆ
ಕಾವಿಗೂ ಅಲ್ಲಲ್ಲಿ ಕಲೆಕಂಡು ಇಂದೆ
ಸುಡುಗಾಡು ಆ ತುಪ್ಪ ಮೊಸರಿಂದ ಎಂದೆ.

## ಎನ್. ಎ. ಕುಲಕರ್ಣಿ

# ಒಂದು ಪೋಸ್ಟ್-ಮಾರ್ಟಂ

ವಿಜ್ಞಾನ ಪ್ರಯೋಗಾಲಯದಿ
ಕಾಜಿನ ಕಪಾಟಿನಲಿ ನೇತಾಡುತಿರುವ
ಈ ಮಾದರಿಯ ಮಾನವ
ಇವನ ಹಣೆ-ಮೈಯಲ್ಲಿ ಜಾತಿ ಕುರುಹಿಲ್ಲ!
ಇವನಾವ ಜಾತಿ ?
ಕ್ರಿಸ್ತಾನ, ಕಬರಿಸ್ತಾನ ? ಯಾವ ಸುಡುಗಾಡಿನಲ್ಲಿದ್ದ ?
ಎಲ್ಲಿದ್ದನೀತ ?
ರಾಮ ಜನ್ಮ ಭೂಮಿಯೋ, ಬಾಬರಿ ಮಸೀದೆಯೋ
ಅಥವಾ......ಪಂಜಾಬ...ವಾಹೆ-ಗುರು, ಬಲಿಯೋ ?
ಕಾಶ್ಮೀರ ಕೊಳ್ಳವೋ, ಮುಂಬಾ-ಬಾಂಬಾಲಯವೋ ?

ಗುಂಡು ತಿಂದದ್ದೀತ, ಪೆಟ್ಟು ತಿಂದದ್ದೀತ... !
ಎಲ್ಲಿಂದ ಗೊತ್ತೆ ?
ಲಂಕೆ ಎಲ್-ಟಿ-ಟಿಯೋ, ಆಸ್ಸಾಂ ಉಗ್ರವಾದಿಯೋ ?
ಆತಂಕವಾದಿಯೋ ?
ಅಂತಗೊಳಿಸಿದ್ದು ?
ನಿಮ್ಮ ಪ್ರಯೋಗಾಲಯದಿ, ಕಂಡು ಹಿಡಿಯ ಬಲ್ಲಿರಾ ?
ಇವನಾವ ಜಾತಿ ?
ಯಾವ ದೇವರ ಲೆಕ್ಕ, ಇವನ ಆತ್ಮಕೆ ಗೊತ್ತ ?
ಹೋಗಲಿ...ಗೊತ್ತಿದೆಯಾ
ಕೊಂದವರ ಜಾತಿ ?

# ಮನುಸ್ಮೃತಿ ಮತ್ತು ಭಾರತದ ಸಂವಿಧಾನ

ಯೋಗೀಂದರ್ ಸಿಕಂದ್

ಬಾಬ್ರಿ ಮಸೀದಿಯನ್ನು ನೆಲಸಮ ಮಾಡಿದ ನಂತರ ಸಂಘ ಪರಿವಾರದ ಮುಂದಿನ ಗುರಿ ಭಾರತದ ಸಂವಿಧಾನವನ್ನು ಅನೂರ್ಜಿತಗೊಳಿಸುವುದೇ ಆಗಿದೆ. ಇಂದು ದೇಶ ಎದುರಿಸುತ್ತಿರುವ ಎಲ್ಲಾ ಸಮಸ್ಯೆಗಳಿಗೂ ಈಗಿನ ಸಂವಿಧಾನವೇ ಕಾರಣ ಎಂದು ಹೇಳುವ ಸಂಘ ಪರಿವಾರವು ಈಗಿರುವ "ಹಿಂದೂ ವಿರೋಧಿ" ಸಂವಿಧಾನವನ್ನು ಪುನರ್ರಚಿಸಬೇಕೆಂದು ಘೋಷಿಸಿದೆ.

೧೯೯೨ರ ಅಕ್ಟೋಬರ್ ೧೩-೧೪ ರಂದು ನಡೆದ ವಿಶ್ವ ಹಿಂದೂ ಪರಿಷತ್ (ವಿ. ಹಿಂ. ಪ)ನ ಸಂತ ಸಮಿತಿಯಲ್ಲಿ ಈಗಿರುವ "ಹಿಂದೂ ವಿರೋಧಿ" ಸಂವಿಧಾನವನ್ನು ಪುನರ್ರಚಿಸಲು ೪ ಸದಸ್ಯರ ಸಮಿತಿಯನ್ನು ರಚಿಸಲಾಗಿದೆ. ಸ್ವಾಮಿ ಮುಕ್ತಾನಂದ ಸರಸ್ವತಿಯವರ ಅಧ್ಯಕ್ಷತೆಯಲ್ಲಿ ರಚಿಸಲಾಗಿರುವ ಈ ಸಮಿತಿಯು ಪ್ರಸಕ್ತ ಸಂವಿಧಾನವನ್ನು ಟೀಕಿಸುವ ಒಂದು ಕರಡು ಪ್ರತಿಯನ್ನು ಸಿದ್ಧಪಡಿಸಿದೆ. "ಭಾರತದ ಏಕತೆ ಮತ್ತು ಅಖಂಡತೆಯನ್ನು, ಮತೀಯ ಸೌಹಾರ್ದತೆ ಹಾಗೂ ಭ್ರಾತೃತ್ವವನ್ನು ಹಾಳುಗೆಡುಹಿದವರಾರು ? ದೇಶದಲ್ಲಿನ ಬಡತನ, ಹಸಿವು, ಭ್ರಷ್ಟಾಚಾರ, ಅಧರ್ಮಗಳಿಗೆ ಕಾರಣರಾರು ? ಇವೆಲ್ಲಕ್ಕೂ ಕಾರಣ ಭಾರತದ ಸಂವಿಧಾನ" ಎಂಬ ಶೀರ್ಷಿಕೆಯಿರುವ ಈ ವರದಿ ಸಂಘ ಪರಿವಾರದವರ ಅಂತರಂಗವನ್ನು ಪ್ರತಿಬಿಂಬಿಸುತ್ತದೆ,

ಪ್ರಸಕ್ತ ಸಂವಿಧಾನದಲ್ಲಿ ಪ್ರಜಾಪ್ರಭುತ್ವ, ಸಮಾನತೆ, ಸಾಮಾಜಿಕ ನ್ಯಾಯ ಹಾಗೂ ಧರ್ಮ ನಿರಪೇಕ್ಷತೆಗೆ ಹೆಚ್ಚು ಪ್ರಾಶಸ್ತ್ಯ ಕೊಡಲಾಗಿದೆ. ಜಾತಿ ಪದ್ಧತಿಯ ಅಸಮಾನತೆ ತುಂಬಿದ ಬ್ರಾಹ್ಮಣರ ಪುರಾತನ ಪದ್ಧತಿಯನ್ನು ಪುನಃ ಸ್ಥಾಪಿಸಲು

ಹೊಂಚು ಹಾಕುತ್ತಿರುವ ಸಂಘ ಪರಿವಾರದವರು, ಈ ನಾಲ್ಕು ಪ್ರಮುಖ ಅಂಶಗಳನ್ನು ವಿರೋಧಿಸುತ್ತಿರುವುದಲ್ಲದೆ ತಮ್ಮ ಹಾದಿಗೆ ಹೆಬ್ಬಂಡೆಯಂತಿರುವ ಪ್ರಸಕ್ತ ಸಂವಿಧಾನವನ್ನು ತೊಡೆದು ಹಾಕಲು ಹವಣಿಸುತ್ತಿದ್ದಾರೆ. ತಮ್ಮ ಜನವಿರೋಧೀ ವಾದವನ್ನು ಸಮರ್ಥಿಸಿಕೊಳ್ಳಲು ಹಾಗೂ ತಮ್ಮ ಸಿದ್ಧಾಂತಗಳಿಗೆ ಜನಬೆಂಬಲ ಗಳಿಸಲು ಸಂವಿಧಾನವನ್ನೇ ಜನವಿರೋಧಿ ಎಂದು ಅರ್ಥೈಸಲಾಗುತ್ತಿದೆ.

ಮುಕ್ತಾನಂದರ ಹೇಳಿಕೆಯಂತೆ "ಇಡೀ ಭಾರತೀಯ ಸಂವಿಧಾನವೇ ಜನವಿರೋಧಿಯಾಗಿದೆ." ನಮ್ಮ ಸಂವಿಧಾನದಲ್ಲಿ ಹಿಂದುಳಿದ ವರ್ಗಗಳು ಮತ್ತು ಮಹಿಳೆಯರ ಏಳಿಗೆಗಾಗಿ ರಚಿಸಲಾಗಿರುವ ಕೆಲವು ಪ್ರಜಾತಂತ್ರ ಕಾಯಿದೆಗಳೂ ಸಹ ಇವರ ದೃಷ್ಟಿಯಲ್ಲಿ ಹಿಂದೂ ವಿರೋಧಿಯಾಗಿದೆ. ಪ್ರಜಾತಂತ್ರದ ವಿರುದ್ಧ ತಮ್ಮ ಹೋರಾಟದಲ್ಲಿ ಬಡಜನರು ಹಾಗೂ ದಲಿತರು ಪಾಲ್ಗೊಳ್ಳುವಂತೆ ಪ್ರೇರೇಪಿಸುವ ಉದ್ದೇಶದಿಂದ ದೇಶದ ಎಲ್ಲಾ ಸಮಸ್ಯೆಗಳಿಗೂ ಸಂವಿಧಾನವನ್ನೇ ದೂಷಿಸಲಾಗುತ್ತಿದೆ. ತಮ್ಮ ಈ ಪ್ರಜಾತಂತ್ರ ವಿರೋಧಿ ಸಮರವು ಸಾಮಾಜಿಕ ನ್ಯಾಯ ಹಾಗೂ ಜನಕಲ್ಯಾಣಕ್ಕಾಗಿಯೇ ಎಂಬ ಭ್ರಮೆ ಉಂಟು ಮಾಡಲು ಕೆಲವೊಮ್ಮೆ ತೀವ್ರವಾದಿ ಸಮಾಜವಾದದ ಮುಖವಾಡ ಧರಿಸುವ ಸಂಘ ಪರಿವಾರದವರ ಮುಖ್ಯ ಉದ್ದೇಶ, ಸಾಮಾಜಿಕ ಹಾಗೂ ಆರ್ಥಿಕದ ಬ್ಬಾಳಿಕೆಯಿಂದ ಕೂಡಿದ ಪ್ರತಿಗಾಮಿ ಸಮಾಜವನ್ನು ಬಲಪಡಿಸುವುದೇ ಆಗಿದೆ.

ತಮ್ಮ ಮುಸ್ಲಿಂ ವಿರೋಧಿ ಕಾರ್ಯಕ್ರಮಗಳಲ್ಲಿ, ಗಲಭೆಗಳಲ್ಲಿ, ಬಲಿಪಶುಗಳಂತೆ ಉಪಯೋಗಿಸಲಾಗುವ ದಲಿತರನ್ನು, ನಿಮ್ನ ಜಾತಿಯ ವರ್ಗದವರನ್ನು ತಮ್ಮೆಡೆಗೆ ಸೆಳೆಯಲು ಸಂಘ ಪರಿವಾರವು ನಿರಂತರವಾಗಿ ಪ್ರಯತ್ನಿಸುತ್ತಿವೆ. ಹಾಗಿದ್ದರೂ ಮುಕ್ತಾನಂದರು ದಲಿತರಿಗೆ ಹಾಗೂ ಬುಡಕಟ್ಟು ಮತ್ತು ಹಿಂದುಳಿದ ಜನಾಂಗದವರಿಗೆ ನೀಡಲಾಗುತ್ತಿರುವ ಮೀಸಲಾತಿಯನ್ನು ತೀವ್ರವಾಗಿ ವಿರೋಧಿಸುತ್ತಾರೆ. "ಈ ಮೀಸಲಾತಿ ಹಾಗೂ ವಿಶೇಷ ಸವಲತ್ತುಗಳಿಂದ ಜನರಲ್ಲಿ ಪ್ರತ್ಯೇಕ ಭಾವನೆ ಉಂಟಾಗಬಹುದೆಂದು" ಅವರು ಹೇಳುತ್ತಾರೆ. ತಾವು ಪ್ರತಿಪಾದಿಸುತ್ತಿರುವ ಬ್ರಾಹ್ಮಣಿಕ ಪದ್ಧತಿಯೇ ನಮ್ಮ ಸಮಾಜವನ್ನು ಸಾವಿರಾರು ಪಂಗಡಗಳಾಗಿ ವಿಂಗಡಿಸಿದೆ ಎಂಬ ಅಹಿತಕರ ಸತ್ಯವನ್ನು ಮುಕ್ತಾನಂದರು ಸಮಯೋಜಿತವಾಗಿ ಮರೆಸುತ್ತಾರೆ. ಬುಡಕಟ್ಟು ಜನಾಂಗದವರಿಗೆ ಸಂಬಂಧಿಸಿದಂತೆ "ಬುಡಕಟ್ಟು ಜನಾಂಗದವರ ಪ್ರಕೃತಿ ದತ್ತವಾದ ಹಕ್ಕುಗಳನ್ನು ಮಾತ್ರ ನಾವು ರಕ್ಷಿಸಿದರೆ ಸಾಕು" ಎಂದು ಹೇಳುವ ಮುಕ್ತಾನಂದರು ಬಹುಶಃ ಆ ಜನಾಂಗದವರು ಆಡಳಿತದಲ್ಲಿ ಯಾವುದೇ ಪಾತ್ರ ವಹಿಸದೆ ದಟ್ಟವಾದ ಕಾಡುಗಳಲ್ಲೇ ಜೀವನವೆಲ್ಲಾ ಕಳೆಯಬೇಕೆಂದು ಆಶಿಸುತ್ತಾರೆಂದು ತೋರುತ್ತದೆ.

ಸಂತ ಸಮಿತಿಯ ವರದಿಯು ಭಾರತದ ರಾಷ್ಟ್ರಧ್ವಜ ಹಾಗೂ ರಾಷ್ಟ್ರಗೀತೆ ಎರಡನ್ನೂ ವಿರೋಧಿಸುತ್ತದೆ. "ಭಾರತದ ರಾಷ್ಟ್ರಧ್ವಜವೆನ್ನಲಾಗುವ ಧ್ವಜದಲ್ಲಿ ಅಶೋಕ ಚಕ್ರವಿರುವುದರಿಂದಲೇ ಅದು ಸಾಮ್ರಾಜ್ಯಶಾಹಿಯ ಕುರುಹಾಗಿದೆ" ಎಂದು ಮುಕ್ತಾನಂದರು ಹೇಳುತ್ತಾರೆ. ಅಶೋಕ ಚಕ್ರವು, ತಮ್ಮ ಸಂಘ ಪರಿವಾರದ ತತ್ವಗಳಿಗೆ ವಿರುದ್ಧವಾದ ಹಾಗೂ ಬೌದ್ಧಮತದ ಸಂದೇಶವಾದ ಪ್ರೀತಿ, ಸಮಾನತೆ ಹಾಗೂ ಭ್ರಾತೃತ್ವವನ್ನು ಪ್ರತಿಬಿಂಬಿಸುವುದು ಮುಕ್ತಾನಂದರ ಈ ದ್ವೇಷಕ್ಕೆ ಕಾರಣ ವಿರಬಹುದು.

ಸಮಾನ ನಾಗರಿಕ ಸಂಹಿತೆಯನ್ನು ಇದುವರೆವಿಗೂ ಜಾರಿಗೊಳಿಸದಿರುವ ಸಂವಿಧಾನ ವನ್ನು ಹೀಯಾಳಿಸುವ ಮುಕ್ತಾನಂದರು ತಮ್ಮ ತತ್ವವನ್ನು ೨೯–೧–೯೩ರ ಫ್ರಂಟ್ ಲೈನ್ ಪತ್ರಿಕೆಗೆ ನೀಡಿರುವ ಸಂದರ್ಶನದಲ್ಲಿ ಸಮರ್ಥಿಸಿಕೊಂಡಿದ್ದಾರೆ. ಆದರೆ ತಮ್ಮ ತತ್ವಗಳಿಗೆ ವಿರುದ್ಧವಾಗಿ ಸರ್ಕಾರ ಯಾವುದೇ ಧಾರ್ಮಿಕ ಹಾಗೂ ಖಾಸಗಿ ವಿಷಯಗಳಲ್ಲಿ ಪ್ರವೇಶಿಸುವುದನ್ನು ವಿರೋಧಿಸುವ ಮುಕ್ತಾನಂದರು ವಿವಾಹಕ್ಕೆ ಸಂಬಂಧಿಸಿದಂತೆ ಯಾವುದೇ ಕಾನೂನು ಇರಬಾರದೆಂದೂ ಪ್ರತಿಪಾದಿಸುತ್ತಾರೆ. ಸರ್ಕಾರವು ವಿವಾಹ ಮತ್ತು ಖಾಸಗಿ ವಿಷಯಗಳಲ್ಲಿ ಕಾನೂನು ವಿಧಿಸಬಾರದೆಂದರೆ ಸಮಾನ ನಾಗರಿಕ ಸಂಹಿತೆಯನ್ನು ಜಾರಿಗೊಳಿಸುವುದು ಅಸಾಧ್ಯವಾಗುತ್ತದೆ. ಮುಕ್ತಾನಂದರಂಥವರೇ ದೇಶವನ್ನಾಳಿದ ಪಕ್ಷದಲ್ಲಿ ಅನಾಗರಿಕ ಪದ್ಧತಿಗಳಾದ ಸತೀ, ಬಾಲ್ಯವಿವಾಹ, ಅಸ್ಪೃಶ್ಯತೆ ಮುಂತಾದವುಗಳನ್ನು ಪುನರಾರಂಭಿಸಬಹುದು. ಪ್ರಸಕ್ತ ಸಂವಿಧಾನದನ್ವಯ ಈ ಪದ್ಧತಿಗಳು ಕಾನೂನುಬಾಹಿರವಾಗಿರುವುದ ರಿಂದಲೇ ಮುಕ್ತಾನಂದರು ಸಂವಿಧಾನವನ್ನು ಅಧಾರ್ಮಿಕ ಎಂದು ದೂಷಿಸುತ್ತಾರೆ.

ಮುಸ್ಲಿಂ ಖಾಸಗಿ ಕಾನೂನಿನಿಂದ ಮುಸಲ್ಮಾನರನ್ನು ಸಂತೃಪ್ತಿಗೊಳಿಸಲಾಗುತ್ತಿದೆ ಎಂದು ದೂಷಿಸುವ ಸಂಘ ಪರಿವಾರದವರೂ ಎಲ್ಲಾ ಭಾರತೀಯರಿಗಲ್ಲದಿದ್ದರೂ, ಹಿಂದೂಗಳಿಗೆ ಮಾತ್ರವಾದರೂ ಮನುಸ್ಮೃತಿ ಆಧಾರಿತ ಕಾನೂನುಗಳನ್ನೇ ಬೋಧಿಸುತ್ತಾರೆ. ಒಂದು ವೇಳೆ ಹಿಂದೂಗಳಿಗಾಗಿ ಮನುಸ್ಮೃತಿ ಆಧಾರಿತ ಕಾನೂನು ವಿಧಿಸಲು ಒಪ್ಪಿದಲ್ಲಿ, ಮುಸ್ಲಿಮರಿಗೂ ಅವರದೇ ಆದ ಖಾಸಗೀ ಕಾನೂನು (ಶರಿಯತ್) ಇರಲು, ಸಂಘಪರಿವಾರದವರು ಒಪ್ಪುವುದರಲ್ಲಿ ಸಂದೇಹವೇ ಇಲ್ಲ.

ಭಾ.ಜ.ಪ.ದ ಉಪಾಧ್ಯಕ್ಷ ಕೆ. ಆರ್. ಮಲ್ಕಾನಿಯವರು ತಮ್ಮ ಆರ್.ಎಸ್. ಎಸ್. ಸ್ಟೋರಿ ಪುಸ್ತಕದಲ್ಲಿ "ಸಮಾನ ನಾಗರೀಕ ಸಂಹಿತೆಯನ್ನು ಜಾರಿಗೊಳಿಸುವುದರಿಂದ

ದೇಶದ ಏಕತೆ ಮತ್ತು ಅಖಂಡತೆ ಹೆಚ್ಚುವುದೆಂಬ ನಂಬಿಕೆ ನನಗಿಲ್ಲವಾದ್ದರಿಂದ, ಸರಕಾರವು ಮುಸ್ಲಿಂ ಖಾಸಗಿ ಕಾನೂನನ್ನು ಮುಂದುವರಿಸುವುದರಲ್ಲಿ ನನ್ನದೇನೂ ಅಭ್ಯಂತರವಿಲ್ಲ" ಎಂದು ರಾ. ಸ್ವ. ಸಂಘದ ನಾಯಕರಾದ ಗೋಲ್ವಾಲ್‌ಕರ್‌ರವರ ಹೇಳಿರುವುದನ್ನು ಉಲ್ಲೇಖಿಸಿದ್ದಾರೆ. ಅದಲ್ಲದೆ "ಗೋಲ್ವಾಲ್‌ಕರ್‌ರವರು ಹಿಂದೂ ಕಾನೂನು ಮನುಸ್ಮೃತಿಯಿಂದ ಭಿನ್ನವಾಗಿರುವುದನ್ನು ಬಯಸುತ್ತಿರಲಿಲ್ಲವೆಂದು" ಮಲ್ಕಾನಿಯವರು ಹೇಳಿದ್ದಾರೆ.

ಈಗಿರುವ ಸಂವಿಧಾನದ ಬದಲು ಮನುಸ್ಮೃತಿಯಾಧಾರಿತ ಸಂವಿಧಾನವನ್ನು ಅನುಷ್ಠಾನಗೊಳಿಸಲೋಸುಗ ಸಂಘಪರಿವಾರದವರು ಸಂವಿಧಾನವನ್ನು ಪುನರ್ರಚಿಸಲು ಒತ್ತಾಯಿಸುತ್ತಿದ್ದಾರೆ. ವಂಶಪಾರಂಪರ್ಯವಾದ ಹಾಗೂ ದಬ್ಬಾಳಿಕೆಯಿಂದ ಕೂಡಿದ ಬ್ರಾಹ್ಮಣರ ಆಳ್ವಿಕೆಗೆ ಇಂಬುಕೊಡುವ ಮನಸ್ಮೃತಿಯು ಮುಸ್ಲಿಮರಿಗಷ್ಟೇ ಅಲ್ಲದೆ ಈ ದೇಶದ ಬಹುತೇಕ ಜನರಿಗೆ, ಶೂದ್ರರೂ, ದಲಿತರೂ, ಮಹಿಳೆಯರಿಗೂ, ಮುಕ್ತ ಚಿಂತಕರಿಗೂ ಶಾಪವಾಗಿ ಪರಿಣಮಿಸಲಿದೆ.

ಗೋಲ್ವಾಲ್‌ಕರ್‌ರವರ ನಿಧನದ ನಂತರ ರಾ. ಸ್ವ. ಸಂಘದವರು ಮನುಸ್ಮೃತಿ ಯೆಡೆಗೆ ಅಷ್ಟು ಒಲವು ತೋರುವುದಿಲ್ಲ ಎನ್ನುವುದು ಒಪ್ಪತಕ್ಕ ಮಾತಲ್ಲ. ಹಿಮಾಚಲ ಪ್ರದೇಶದ ಭಾ. ಜ. ಪ. ಸರಕಾರವು ಮನಲಿಯಲ್ಲಿರುವ ಮನು ದೇವಾಲಯದ ಜೀರ್ಣೋದ್ಧಾರಕ್ಕಾಗಿ ಲಕ್ಷಾಂತರ ರೂಪಾಯಿಗಳನ್ನು ಖರ್ಚು ಮಾಡಿರುವುದೇ ಇದಕ್ಕೆ ಸಾಕ್ಷಿ. ೧೦-೫-೯೨ರ ಆರ್ಗನೈಸರ್ ಪತ್ರಿಕೆ (ರಾ. ಸ್ವ. ಸಂಘದ ಪತ್ರಿಕೆ)ಯಲ್ಲಿ "ಭಾರತ ದೇಶವನ್ನು, ಹಿಂದೂ ರಾಷ್ಟ್ರವನ್ನು ಕಾಪಾಡಲು ಹಾಗೂ ಹಿಂದೂಗಳ ವಿರುದ್ಧವಿರುವ ಪಕ್ಷಪಾತವನ್ನು ಹೋಗಲಾಡಿಸಲು ಹಿಂದೂ ನ್ಯಾಯವಾದಿಗಳಿಂದ ಸಂವಿಧಾನದ ಪುನರ್ರಚನೆಗೆ ಕರೆ" ಎಂಬ ಶೀರ್ಷಿಕೆಯಡಿಯಲ್ಲಿ ಹೀಗೆ ಹೇಳಲಾಗಿದೆ.

"ವಿ. ಹಿಂ. ಪ. ಮಧುರೈನಲ್ಲಿ ಏಪ್ರಿಲ್ ೧೮-೧೯ ರಂದು ನಡೆದ ಹಿಂದೂ ನ್ಯಾಯವಾದಿಗಳ ರಾಜ್ಯ ಅಧಿವೇಶನದಲ್ಲಿ ಭಾರತದ ಸಂವಿಧಾನವನ್ನು ಪುನರ್ರಚಿಸಲು ಕರೆ ನೀಡಲಾಗಿದೆ. ಉತ್ತರ ಪ್ರದೇಶದ ಅಡ್ವೊಕೇಟ್ ಜನರಲ್ ಆದ ವಿ. ಕೆ. ಎಸ್. ಚಂದಾರಿಯವರು ತಮ್ಮ ಮುಖ್ಯ ಭಾಷಣದಲ್ಲಿ ಮನುಸ್ಮೃತಿಯು ಎಲ್ಲಾ ಕಾಲಕ್ಕೂ, ಎಲ್ಲಾ ಜನಾಂಗಗಳಿಗೂ ನ್ಯಾಯ ಒದಗಿಸಿರುವ ಧರ್ಮಶಾಸ್ತ್ರವಾದ್ದರಿಂದ, ಅದು ಇಡೀ ಮಾನವ ಕೋಟಿಗೆ ಅವಶ್ಯಕವೆಂದು ಹೇಳಿದ್ದಾರೆ."

ಸಂಘ ಪರಿವಾರದಲ್ಲಿ ಇದೀಗಲೇ ಸಂವಿಧಾನವನ್ನು ಪುನರ್ರಚಿಸುವ ಹಾಗು ಮನುಸ್ಮೃತಿಯಾಧಾರಿತ ಸಂವಿಧಾನವನ್ನು ಅನುಷ್ಠಾನಗೊಳಿಸುವ ಹಂಬಲವಿದೆಯಾದರೂ, ಅದರಿಂದ ಹಾನಿಗೊಳಗಾಗುವ ಶೇ. ೯೫ರಷ್ಟು ಜನತೆಯ ಬೆಂಬಲ ಕಳೆದುಕೊಳ್ಳುವ ಭಯದಿಂದಲೇ ಹಿಂಜರಿಯುತ್ತಿದ್ದಾರೆ, ಈ ಕಾರಣದಿಂದಲೇ ಜನತೆಯ ಎಲ್ಲಾ ಸಮಸ್ಯೆಗಳಿಗೂ ಈಗಿನ ಸಂವಿಧಾನವನ್ನು ದೂಷಿಸಿ ಸಂಘಪರಿವಾರವು ಜನ ಬೆಂಬಲ ಗಳಿಸುತ್ತಿದೆ. ಈ ದೃಷ್ಟಿಯಿಂದ ನೋಡಿದರೆ ತಮ್ಮ ಪುಸ್ತಕದಲ್ಲಿ ಸಂವಿಧಾನದಲ್ಲಿರುವ ಕೆಲವೇ ದೋಷಗಳಿಗೆ ತಮ್ಮ ಊಹೆಗಳನ್ನು ಸೇರಿಸಿ ಸಂವಿಧಾನವನ್ನು ಟೀಕಿಸುವ ಮುಕ್ತಾನಂದರು ತಮ್ಮ ಸಂವಿಧಾನದ ನಿಯಮಗಳು ಹೇಗಿರುತ್ತೆಂಬುದನ್ನು ಹೇಳದಿರುವುದು ಅಚ್ಚರಿಯ ಸಂಗತಿಯೇನಲ್ಲ.

ಪ್ರಜಾ ಚುನಾಯಿತ ಸರ್ಕಾರ ವಿಧಿಸಿದ ಯಾವುದೇ ಕಾನೂನುಗಳನ್ನು ಸ್ವೀಕರಿಸಲಾರದ ಫ್ಯಾಸಿಸ್ಟ್ ಶಕ್ತಿಗಳು ಸದಾ ಪ್ರಜಾ ಪ್ರಭುತ್ವವನ್ನು ವಿರೋಧಿಸುತ್ತಲೇ ಬಂದಿದ್ದಾರಲ್ಲದೆ, ದೇಶದ ಕಾನೂನನ್ನು ಬ್ರಾಹ್ಮಣ ಪುರೋಹಿತ ವರ್ಗದವರು ಮಾತ್ರ ರಚಿಸಬಹುದೆಂದು ಪ್ರತಿಪಾದಿಸುತ್ತಾರೆ. ಅಸ್ಪೃಶ್ಯತೆ, ಜಾತಿಪದ್ಧತಿ, ಸತೀ ಪದ್ಧತಿಗಳು ಹಿಂದೂ ಧರ್ಮದ ಅವಿಭಾಜ್ಯ ಅಂಗಗಳೆಂದು ಹೇಳುವ ಪುರಿ ಶಂಕರಾಚಾರ್ಯರ ಸಿದ್ಧಾಂತಗಳನ್ನು ಸಮರ್ಥಿಸುವ ವಿ. ಹಿಂ. ಪ. ನ ಕಾರ್ಯದರ್ಶಿ ಅಶೋಕ್ ಸಿಂಘಾಲ್‌ರವರು "ನಮ್ಮ ಧರ್ಮಾಚಾರ್ಯರುಗಳು ಉಪದೇಶಿಸಿದ ಧರ್ಮವನ್ನೇ ನಾವು ಕಾನೂನಿನಂತೆ ಪಾಲಿಸುತ್ತೇನೆ." (ಪಯನೀರ ೪-೧೨-೯೨) ಎಂದು ಹೇಳುತ್ತಾರೆ. ಬಹುಶಃ ಸಿಂಘಾಲ್‌ರವರ ಹಿಂದೂ ರಾಷ್ಟ್ರದಲ್ಲಿ ಈ ಸಿದ್ಧಾಂತಗಳನ್ನೇ ಅಳವಡಿಸಬಹುದು.

ಮನುಸ್ಮೃತಿಯೇ ಹಿಂದೂ ಕಾನೂನಿನ ಅಡಿಗಲ್ಲು ಎಂದು ಹೇಳುವ ಕಾಂಚೀಪೀಠದ ಪರಮಾಚಾರ್ಯರು ಹಿಂದೂ ರಾಷ್ಟ್ರಕ್ಕೆ ಅದೇ ಬುನಾದಿಯಾಗಬೇಕೆಂದು ಆಶಿಸುತ್ತಾರೆ. ಪುರಾತನ ಕಾಲದ ಬ್ರಾಹ್ಮಣರ ಆಳ್ವಿಕೆಯನ್ನು ಮುಕ್ತ ಕಂಠದಿಂದ ಪ್ರಶಂಸಿಸುವ ಪರಮಾಚಾರ್ಯರು ಪುರಾತನಕಾಲದಲ್ಲಿ ನಮ್ಮ ದೇಶದ ಆಡಳಿತ ಯಂತ್ರವು ಸಂಪೂರ್ಣವಾಗಿ ಧರ್ಮಶಾಸ್ತ್ರವನ್ನಾಧರಿಸಿದ್ದುದು ಉನ್ನತ ಅಂಶವಾಗಿತ್ತಲ್ಲದೆ, ಬೇರೆಲ್ಲಾ ಧರ್ಮ ಶಾಸ್ತ್ರಗಳಿಗಿಂತಲೂ ಮನು ಧರ್ಮ ಶಾಸ್ತ್ರವೇ ಅಂದಿನ ರಾಜ ಮಹಾರಾಜರುಗಳಿಗೆ ಮಾರ್ಗದರ್ಶಿಯಾಗಿದ್ದುದರಿಂದ, ಯಾವ ರಾಜನೂ ಮನು ಧರ್ಮಶಾಸ್ತ್ರದಲ್ಲಿರುವ ಕಾನೂನುಗಳನ್ನು ತಿದ್ದುಪಡಿಸಲಿಲ್ಲ ಅಥವಾ ಬದಲಾಯಿಸಲೂ ಇಲ್ಲ ಎಂದು ಹೇಳುತ್ತಾರೆ. (ಭವನ್ಸ್ ಜನರಲ್ ೩೦-೧೧-೮೯) ತಮ್ಮ ಶಾಸ್ತ್ರಾಧಾರಿತ ಜೀವನ ಶೈಲಿಯನ್ನು ಕಾಲಕ್ಕೆ ತಕ್ಕಂತೆ ಬದಲಾಯಿಸಿಕೊಂಡು ಹೋಗ

ಬೇಕೆಂದು ಹೇಳುವ ಆಧುನಿಕವಾದಿಗಳನ್ನು ಕಟುವಾಗಿ ಟೀಕಿಸುವ ಪರಮಾಚಾರ್ಯರು, ಮನಸ್ಮೃತಿ ಇಂದಿಗೂ ಪ್ರಸ್ತುತ ಎಂದೇ ವಾದಿಸುತ್ತಾರೆ..

ಪ್ರಜಾತಂತ್ರವನ್ನು ತೀವ್ರವಾಗಿ ವಿರೋಧಿಸುವ ಕಾಂಚಿ ಪರಮಾಚಾರ್ಯರು ಕೇವಲ ಉಚ್ಚ ವರ್ಗದವರಿಗೆ ಮಾತ್ರ ಮತದಾನದ ಹಕ್ಕು ನೀಡಬೇಕೆಂದು ವಾದಿಸುತ್ತಾರೆ. "ನಮ್ಮ ಪ್ರತಿನಿಧಿಗಳನ್ನು ಚುನಾಯಿಸುವಾಗ ಸರಿಯಾದ ಶಿಕ್ಷಣ, ಆರ್ಥಿಕ ಸ್ಥಿತಿ, ರಾಜಕೀಯ ಸ್ಥಿತಿಗಳನ್ನರಿತಿರುವ ಜವಾಬ್ದಾರಿ ಇರುವ ಜನರು ಮಾತ್ರ ಮತ ನೀಡಬೇಕು" ಎಂದು ಪ್ರತಿಪಾದಿಸುವ ಪರಮಾಚಾರ್ಯರು "ಮತದಾನ ಮಾಡಲು ಅರ್ಹತೆಯನ್ನು ವಿಧಿಸುವಾಗ ಜಾತಿ, ಧರ್ಮ ಹಾಗೂ ಆರ್ಥಿಕ ಸ್ಥಿತಿ, ಇವೆಲ್ಲವನ್ನೂ ಸಮ್ಮಿಳಿತಗೊಳಿಸಬೇಕೆಂದು" ಬಯಸುತ್ತಾರೆ. ಇದರರ್ಥ ಕೇವಲ ಉಚ್ಚ ವರ್ಗದ ಹಿಂದೂಗಳು ಮಾತ್ರ ಮತದಾನದ ಹಕ್ಕಿಗೆ ಅರ್ಹರೆಂದಾಗುತ್ತದೆ.

ಅಂತೆಯೇ ಈಗ ಯೋಚಿಸಲಾಗುತ್ತಿರುವ ಧಾರ್ಮಿಕ ಚೌಕಟ್ಟಿನಲ್ಲಿ ಎಲ್ಲರಿಗೂ ಚುನಾವಣೆಯಲ್ಲಿ ಸ್ಪರ್ಧಿಸುವ ಹಕ್ಕು ಸಹ ಇರುವುದಿಲ್ಲವೆಂಬುದು ಸರ್ವವಿದಿತ. ಪರಮಾಚಾರ್ಯರ ಮಾತಿನಲ್ಲೇ ಹೇಳಬೇಕೆಂದರೆ "ಕೇವಲ ಭೂಸ್ವಾಮ್ಯವಿರುವ ಸ್ವಂತ ಮನೆ ಆಸ್ತಿ ಪಾಸ್ತಿ ಹೊಂದಿರುವ ೩೦ರಿಂದ ೬೦ ವರ್ಷದೊಳಗಿನ ಹಾಗೂ ಧರ್ಮಶಾಸ್ತ್ರಗಳಲ್ಲಿ ಪರಿಣತರಾಗಿರುವ ವ್ಯಕ್ತಿಗಳು ಮಾತ್ರ ಚುನಾವಣೆಗಳಲ್ಲಿ ಅಭ್ಯರ್ಥಿಗಳಾಗಲು ಅರ್ಹರು." ಮೊದಲೆರಡು ಶರತ್ತುಗಳು ಬಡವರಿಗೆ ಅಭ್ಯರ್ಥಿಯಾಗುವ ಹಕ್ಕನ್ನು ಕಸಿದುಕೊಂಡರೆ ಕೊನೆಯ ಶರತ್ತು ಈ ಹಕ್ಕನ್ನು ಕೇವಲ ಬ್ರಾಹ್ಮಣರಿಗೆ ಮಾತ್ರ ಮೀಸಲಾಗಿಡುತ್ತದೆ.

"ಭಾರತದಂತಹ ಬಡದೇಶಕ್ಕೆ ಚುನಾಯಿತ ಪ್ರತಿನಿಧಿಗಳ ಆಳ್ವಿಕೆ ಬಹಳ ದುಬಾರಿ ಹಾಗೂ ಬೆನ್ನು ಮುರಿಯುವ ಪದ್ಧತಿಯಾಗುತ್ತದೆ" ಎಂದು ಹೇಳುವ ಮುಕ್ತಾನಂದರು ತಮ್ಮ ಪ್ರಜಾತಂತ್ರ ವಿರೋಧೀ ನಿಲುವನ್ನು ಸಮರ್ಥಿಸಿಕೊಳ್ಳಲು ಪ್ರಸಕ್ತ ಸಂವಿಧಾನದಲ್ಲಿರುವ ಪ್ರಜಾಸತ್ತಾತ್ಮಕ ಕಾಯಿದೆಗಳನ್ನೇ ದೇಶದ ಎಲ್ಲ ಸಮಸ್ಯೆಗಳಿಗೂ ಕಾರಣವಾಗಿ ಮಾಡಿ, ಜನ ಬೆಂಬಲ ಗಳಿಸಲೆತ್ನಿಸುತ್ತಿದ್ದಾರೆ. ಪ್ರಜಾಪ್ರಭುತ್ವದ ಆಧಾರ ಸ್ತಂಭಗಳನ್ನೆ ವಿರೋಧಿಸುವ ಅವರು ಸಂವಿಧಾನದ ೫ನೇಯ ವಿಧಿಯಲ್ಲಿರುವ (ಪುಟ : ೫೨-೧೫೧) ೫ ಅಧ್ಯಾಯಗಳಾದ ೧) ಶಾಸನಸಭೆ ೨) ಲೋಕಸಭೆ ೩) ರಾಷ್ಟ್ರಪತಿಯವರ ಅಧಿಕಾರ ೪) ನ್ಯಾಯಾಂಗ ಹಾಗೂ ೫) ರಾಜ್ಯಾದಾಯದ ಮಹಾಂಕೇಕ್ಷಕ (C. A. G. of India) ಎಲ್ಲವೂ ಇಂದಿನ ಭಾರತ ದೇಶದ ಪರಿಸ್ಥಿತಿಗೆ ಅಪ್ರಸ್ತುತ ಎಂದು ಹೇಳುತ್ತಾರೆ.

ಬಹುತೇಕ ಹಿಂದೂತ್ವವಾದಿಗಳಂತೆ ಕಾಂಚಿ ಪರಮಾಚಾರ್ಯರೂ ಸಹ ಹಿಂದಿನ ಕಾಲದ ರಾಜರಾಳ್ವಿಕೆಯನ್ನು ವೈಭವೀಕರಿಸುವುದೇ ಅಲ್ಲದೆ ಇಂದಿನ ಪ್ರಜಾತಂತ್ರ ಪದ್ಧತಿಯನ್ನು ಅಧಾರ್ಮಿಕವೆಂದು ಹೀಯಾಳಿಸುತ್ತಾರೆ. ಮುಕ್ತಾನಂದರ ಕೃತಿಗೆ ಮುನ್ನುಡಿ ಬರೆದಿರುವ ದೇವಾನಂದರೂ ಇದೇ ರೀತಿಯ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ಹಿಂದಿನ ರಾಜರುಗಳು ಶಾಸ್ತ್ರಗಳಲ್ಲಿರುವಂತೆ ಧರ್ಮವನ್ನು ಪಾಲಿಸಿದುದೇ ಅಲ್ಲದೆ ಬ್ರಾಹ್ಮಣ ಧರ್ಮಾಚಾರ್ಯರು ಹೇಳುವಂತೆ ನಡೆಯುತ್ತಿದ್ದುದು ಇವರ ವಾದಕ್ಕೆ ಕಾರಣವಿರಬಹುದು. ಆದರಿಂದಲೇ ವಿಶ್ವದ ಏಕೈಕ ಹಿಂದೂ ರಾಷ್ಟ್ರವಾದ ನೇಪಾಳದ ರಾಜನನ್ನೇ ಇಂದಿಗೂ ಹಿಂದೂಗಳ ರಾಜನೆಂದು ಹಿಂದುತ್ವವಾದಿಗಳು ಭಾವಿಸುತ್ತಾರೆ." ಮಹಾರಾಜ ವೀರೇಂದ್ರ ವಿಶ್ವದ ಎಲ್ಲಾ ಹಿಂದೂಗಳ ಹೃದಯ ಸಾಮ್ರಾಟನಾಗಿದ್ದಾನೆ" ಎಂದು ರಾ. ಸ್ವ. ಸಂಘದ ಪತ್ರಿಕೆ ಪಾಂಚಜನ್ಯದಲ್ಲಿ (೬-೧೨-೮೨) ಹೇಳಲಾಗಿದೆ.

ಈ ಹಿನ್ನೆಲೆಯಲ್ಲಿ ಪ್ರಜಾಪ್ರಭುತ್ವವನ್ನು ಅಳಿಸಿ ಹಾಕಿ ರಾಜರ ಆಳ್ವಿಕೆಯನ್ನು ಪುನರಾರಂಭಿಸಿದರೂ ಅಚ್ಚರಿಯೇನಿಲ್ಲ, ಬಹುತೇಕ ಮಹಾರಾಜ, ರಾಣಿಯರು ಹಿಂದೂತ್ವವಾದಿಗಳ ಪ್ರತಿಗಾಮಿ ರಾಜಕೀಯ ಆರ್ಥಿಕ ಹಾಗೂ ಸಾಮಾಜಿಕ ಸಿದ್ಧಾಂತಗಳನ್ನು ಒಪ್ಪಿಕೊಂಡು ಅವರ ಗುಂಪಿಗೆ ಸೇರಿಕೊಂಡಿದ್ದಾರೆ. ಗ್ವಾಲಿಯರ್‌ನ ವಿಜಯರಾಜೆ ಸಿಂಧಿಯ, ಉದಯಪುರದ ರಾಜ ಭಗವಾತ್‌ಸಿಂಗ್, ಈ ಬೆಳವಣಿಗೆಗೆ ನಿದರ್ಶನಗಳು.

ಹಿಂದುತ್ವದ ಪ್ರಮುಖ ಪ್ರತಿಪಾದಕರಾದ ವಿ. ಡಿ. ಸಾವರ್‌ಕರ್‌ರವರು ನೇಪಾಳದ ರಾಜ ಭಾರತವನ್ನು ಆಕ್ರಮಿಸುವುದನ್ನು ಬಯಸಿದ್ದರು. ಅವರ ಪ್ರಮುಖ ಕೃತಿಯಾದ "ಹಿಂದೂ ಸಂಘಟನೆಯಲ್ಲಿ ಸ್ವತಂತ್ರ ಹಿಂದೂಸ್ತಾನದ ಮುಂದಿನ ಸಾಮ್ರಾಟ ಯಾರಾಗಬಹುದು ?" ಎಂಬ ಬರಹದಡಿಯಲ್ಲಿ ಸಾವರ್‌ಕರ್‌ರವರು ಹೀಗೆ ಹೇಳುತ್ತಾರೆ.

"ಇಂದಿನ ಪರಿಸ್ಥಿತಿಯಲ್ಲಿ ನೇಪಾಳದ ಚಕ್ರವರ್ತಿಗಳು ಮಾತ್ರ ಹಿಂದೂಸ್ಥಾನದ ಸಾಮ್ರಾಜ್ಯ ಸಿಂಹಾಸನವನ್ನೇರಲು ಅರ್ಹರಾಗಿರುತ್ತಾರೆ. ತಮ್ಮಿಂದ ಅಧಿಕಾರ ಕೈಜಾರಿಹೋದಲ್ಲಿ ಬ್ರಿಟೀಷರೂ ಕೂಡ, ತಮ್ಮಿಂದಲೇ ಆಕ್ರಮಣಕ್ಕೊಳಗಾಗಿ ತಮ್ಮ ಬಂಟರಾಗಿರುವ ನಿಜಾಮರಿಗಿಂತ, ತಮಗೆ ಸರಿಸಾಟಿಯಾದ ಹಾಗೂ ಸ್ವತಂತ್ರರಾದ ನೇಪಾಳದ ಚಕ್ರವರ್ತಿಗೆ ಅಧಿಕಾರ ವಹಿಸುತ್ತಾರೆ.

"ನಾವಿಲ್ಲಿ ಮತ್ತೊಮ್ಮೆ ಪುನರುಚ್ಚರಿಸುವದೇನಂದರೆ ಇವೆಲ್ಲವೂ ಬರೀ ಪಾಂಡಿತ್ಯದ ಮಾತುಗಳು, ಆದರೆ ಹಿಂದೂಗಳು ಇದನ್ನರಿತು ಮನಸ್ಸು ಮಾಡಿದರೆ ಇಂದು ಬರೀ ಪಾಂಡಿತ್ಯವಾಗಿರುವುದೆಲ್ಲವೂ ನಿಜವಾಗುವುದನ್ನೂ ಕಾಣಬಹುದು" ಎಂದು ಹೇಳಿ ಸಾವರ್‌ಕರ್‌ರವರು ತಮ್ಮ ಬರಹ ಮುಕ್ತಾಯಗೊಳಿಸುತ್ತಾರೆ.

ಈ ಹಿಂದೂತ್ವವಾದಿಗಳು ಯಾವುದನ್ನು ಸಮರ್ಥಿಸುತ್ತಾರೆ. ಏತಕ್ಕಾಗಿ ಹೋರಾಡುತ್ತಾರೆ ಎಂದು ಅರಿಯುವುದು ನಮ್ಮ ಕರ್ತವ್ಯವಾಗಿದೆ. ಪುರಾತನ ಮೌಢ್ಯತೆ ಹಾಗೂ ಜಾತೀವಾದಕ್ಕೆ ಮನುಸ್ಮೃತಿಯಾಗಿ ಜೀವತುಂಬುವ ಅವರ ಪ್ರಯತ್ನಕ್ಕೆ ನಾವಿಂದು ಹೆಬ್ಬಂಡೆಯಾಗಿ ಅಡ್ಡನಿಲ್ಲಬೇಕಾಗಿದೆ.

ಕನ್ನಡಕ್ಕೆ : **ನಾ. ದಿವಾಕರ**

ಕೃಪೆ : **ಕೆಂಬಾವುಟ** ವಿಶೇಷಾಂಕ, ಅಗಸ್ಟ ೧೫, ೧೯೯೩

---



---

# ಡಾ. ಕಲಬುರ್ಗಿ ಅವರ ‘ಕನ್ನಡ ಸಂಶೋಧನ ಶಾಸ್ತ್ರ’ *

ಸದಾನಂದ ಪಾಟೀಲ

‘ಸಂಶೋಧನೆ ಮಾಡುವುದು ಕಷ್ಟ; ಸಂಶೋಧನೆಯ ಬಗ್ಗೆ ಬರೆಯುವುದು ಇನ್ನೂ ಕಷ್ಟ’ ಎಂಬ ಅರಿಕೆಯೊಂದಿಗೆ ಅನ್ವೇಷಣಾತ್ಮಕ ಸಂಶೋಧನಶಾಸ್ತ್ರ ರಚನೆಯನ್ನು ಡಾ|| ಎಂ. ಎಂ. ಕಲಬುರ್ಗಿಯವರು ಮುಂದಿಡುತ್ತಾರೆ.

ಹತ್ತು ವರ್ಷಗಳ ಹಿಂದೆ ಅವರು ಬೋಧಿಸುತ್ತಿದ್ದ ಸಂಶೋಧನಶಾಸ್ತ್ರದ ಪಾಠಗಳನ್ನು ನಾನು ಹಾಗೂ ಗೆಳೆಯ ಶ್ರೀ ಸಿಂಧೆ ಅವರು ಸೇರಿ “ಡಾ. ಕಲಬುರ್ಗಿಯವರ ಸಂಶೋಧನ ಪಾಠಗಳು” ಎಂಬುದಾಗಿ ಸಿದ್ಧಪಡಿಸಿ ಅವರ ಮುಂದಿಟ್ಟಿದ್ದೆವು. ಏನಕೇನ ಕಾರಣ ಅದು ಪ್ರಕಟವಾಗಲಿಲ್ಲ. ಈಗೆನಿಸುತ್ತದೆ: ಅವರಿಂದ ಒಂದು ಉತ್ಕೃಷ್ಟ ಕೃತಿ ಬರಲಿರುವಾಗ ಅವರ ಮೌಖಿಕ ಪಾಠಗಳನ್ನು ನಮ್ಮ ಅಶಿಸ್ತಿನ ಬರವಣಿಗೆಯಲ್ಲಿ ಹಿಡಿದಿಟ್ಟು ತಪ್ಪು ಮಾಡಿದ್ದೆವು ಎಂದು. ಈ ಪುಸ್ತಕಕ್ಕೂ ಅವರ ಆಗಿನ ಪಾಠಗಳಿಗೂ ಬಹಳಷ್ಟು ವ್ಯತ್ಯಾಸಗಳಿವೆ. ಅವರ ಆ ಉಪನ್ಯಾಸಗಳು ನೇರವಾಗಿ ಮನಸ್ಸು ಮತ್ತು ಹೃದಯಗಳ ಒಳಸೇರುತ್ತಿದ್ದವು. ಈ ಪುಸ್ತಕ ಮನಸ್ಸು ಮತ್ತು ಬುದ್ಧಿಗಮ್ಯವಾಗಿ ಎಂ. ಎ. ವಿದ್ಯಾರ್ಥಿ–ವೃಂದಕ್ಕೆ, ಉಪನ್ಯಾಸಕರಿಗೆ, ಸಂಶೋಧಕರಿಗೆ ಚಿಂತನೆ ನೀಡಿ ನೆರವಾಗಬಲ್ಲ ಅಮೂಲ್ಯ ಕೃತಿಯಾಗಿದೆ.

**ಸಂಶೋಧನೆ–ಸಂಶೋಧಕ :**

ಇದು ಮೊದಲ ಅಧ್ಯಾಯ. ವೈಜ್ಞಾನಿಕ ಚೌಕಟ್ಟಿನಲ್ಲಿ ಎಲ್ಲರಿಗೂ ಮನಮುಟ್ಟುವಂತೆ ಸಂಶೋಧನೆಯೆಂದರೇನು ? ಅದರ ಅರ್ಥವ್ಯಾಪ್ತಿ ಕುರಿತಾದ ಉದಾಹರಣೆ

* ಸೌಜನ್ಯ ಪ್ರಕಾಶನ, ಧಾರವಾಡ (೧೯೯೨)

ಸಹಿತ ನಿರೂಪಣೆ ಇದೆ. ಹುಡುಕುವಿಕೆಯು ಭೂತರೂಪ ಡಿಸ್ಕವರಿ. ಹುಡುಕುವಿಕೆಯು ಭವಿಷತ್‌ರೂಪ ಇನ್‌ವೆನ್‌ಶನ್. ಡಿಸ್ಕವರಿ ಅನ್ವೇಷಣ, ಇನ್‌ವೆನ್‌ಶನ್‌ಗೆ ಆವಿಷ್ಕರಣ ಎಂಬ ಸೂಕ್ತಪದಗಳನ್ನು ಬಳಸಲು ಒತ್ತು ಕೊಡುತ್ತಾರೆ. ಅನ್ವೇಷಣ ಸಂಬಂಧಿ ಸಂಶೋಧನೆಯು ಸ್ವರೂಪವನ್ನು ಶಾಸ್ತ್ರವೆಂದೂ. ಆವಿಷ್ಕರಣ ಸ್ವರೂಪವನ್ನು ವಿಜ್ಞಾನವೆಂದೂ ಕರೆದು 'ಸಂಶೋಧನ ಶಾಸ್ತ್ರ'ವೆಂಬ ಹೆಸರಿನ ಸಾರ್ಥಕ್ಯವನ್ನು ವಿಶದಪಡಿಸುತ್ತಾರೆ.

ಶಾಸ್ತ್ರೀಯ ಶಿಸ್ತಿನಿಂದ ಆಕರ ಶೋಧ, ಆಕರ ವಿಶ್ಲೇಷಣೆ, ಆಕರ ವ್ಯಾಖ್ಯಾನದ ಮೂಲಕ ಗತಕಾಲೀನ ವಸ್ತು ಸ್ಥಿತಿ, ಅದರ ಹಿಂದಿನ ನಿಜಸ್ಥಿತಿ ಕಂಡುಹಿಡಿದು ವರ್ತಮಾನವನ್ನು ತಿದ್ದಬಲ್ಲವನು ಸಂಶೋಧಕನೆನಿಸುತ್ತಾನೆಂದು ಹೇಳಿ, ಅವನ ಆರು ಅರ್ಹತೆಗಳನ್ನು ಸೊಗಸಾದ ಉದಾಹರಣೆಗಳೊಂದಿಗೆ ಕೊಡುತ್ತಾರೆ.

**ಕುತೂಹಲ :** ಶೃತಿಮಾಡಿ ಇಟ್ಟ ವೀಣೆಯಂತೆ ಸದಾ ಎಚ್ಚರಗೊಂಡಿರುವ, ಅಸವಧಾನ ಚಿತ್ತದಿಂದಿರುವ, ವಿಷಯವನ್ನು ಮೈಯೆಲ್ಲಾ ಕಣ್ಣಾಗಿ ಹುಡುಕುವ, ಕಿವಿಯಾಗಿ ಕೇಳುವ ಆಸಕ್ತಿಯ ಸ್ಥಾಯೀಭಾವವೇ ಕುತೂಹಲವೆನಿಸುತ್ತದೆ. ಇದು ಸಂಶೋಧಕನ ಪ್ರಥಮ ಅರ್ಹತೆ. ಉತ್ತರ ಸಿಗದಿದ್ದರೂ ಕುತೂಹಲದಿಂದ ಎತ್ತಿದ ಪ್ರಶ್ನೆ ಶೋಧನೆಯ ಪ್ರಥಮ ಹಂತವಾಗುತ್ತದೆ. ಪ್ರಶ್ನೆಯಿಂದ ಪ್ರಶ್ನೆ–ಉಪಪ್ರಶ್ನೆಗಳಿಂದ ಉತ್ತರದ ಕಡೆಗೆ ಸಂಶೋಧಕ ಸಾಗಬೇಕು– ಎಂಬ ನಿರೂಪಣೆ ಇದೆ.

**ಪ್ರಾಮಾಣಿಕತೆ :** ಸಾರಸ್ವತ ಪ್ರಪಂಚಕ್ಕೆ ಸಂಶೋಧಕರು ಮೋಸ ಮಾಡಬಾರದು. ಇನ್ನೊಬ್ಬರ ಅಭಿಪ್ರಾಯವನ್ನು ಸಹನೆಯಿಂದ ಕೇಳುವ ಮನೋಧರ್ಮ. ಇನ್ನೊಬ್ಬರಿಗೆ ತಮ್ಮ ಅಭಿಪ್ರಾಯ ವ್ಯಕ್ತಪಡಿಸುವ ಸ್ವಾತಂತ್ರ್ಯವಿದೆಯೆಂಬ ಮೂಲಭೂತ ಪ್ರಜ್ಞೆ ಸಂಶೋಧಕನಿಗೆ ಅವಶ್ಯ ಬೇಕು ಎನ್ನುತ್ತಾ ವಾಲ್ಟೇರರ ಮಾತನ್ನು ಉದಾಹರಿಸಿದ್ದಾರೆ. "ನಿನ್ನ ಸಾವಿರ ಮಾತಿನಲ್ಲಿ ಒಂದನ್ನೂ ಒಪ್ಪಲಾರೆ. ಆದರೆ ಹೇಳುವ ನಿನ್ನ ಸ್ವಾತಂತ್ರ್ಯಕ್ಕೆ ಧಕ್ಕೆ ಬಂದರೆ ನನ್ನ ಪ್ರಾಣ ಪಣಕ್ಕಿಟ್ಟು ಜೀವದ ಹಂಗುದೊರೆದು ಹೋರಾಡಿ ನಿನ್ನ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ರಕ್ಷಿಸುತ್ತೇನೆ." ಈ ಪ್ರಾಮಾಣಿಕತೆ ಬದುಕಿನಲ್ಲಿಯೂ ಮೈಗೂಡಿ ಸತ್ಯ ಸಂರಕ್ಷಕನಾಗಿ, ಲೋಕವಿರೋಧಿಯಾಗಿ ಬದುಕುವ ಸಾಧ್ಯತೆ ಇದೆ. ಹಾಗೆ ಪ್ರಾಮಾಣಿಕನಾದ ಸಂಶೋಧಕ ತಪ್ಪು ಹೇಳಿದ್ದರೆ ಇನ್ನೊಬ್ಬರು ಅದರ ಸರಿಯಾದ ನಿರ್ಣಯ ಮಂಡಿಸಿದ್ದರೆ ಅದನ್ನು ಮುಕ್ತ ಮನಸ್ಸಿನಿಂದ ಒಪ್ಪಿಕೊಳ್ಳುವ ಗುಣವನ್ನು ಬೆಳೆಯಿಸುತ್ತದೆ ಎನ್ನುತ್ತಾರೆ.

**ಧೈರ್ಯ :** ಸತ್ಯ ಶಿಲುಬೆಗೇರಿದಂತೆ ಒಮ್ಮೊಮ್ಮೆ ಭಾರತದಂತಹ ಜಾತಿವಾದಿ ರಾಷ್ಟ್ರದಲ್ಲಿ ಸಂಶೋಧಕನು ಅರಕ್ಷಕನಾಗಿರುವುದರ ಉದಾಹರಣೆ ನೀಡಿ, ಸಂಶೋಧ

ಕನು ಧೈರ್ಯಶಾಲಿಯಾಗಿರಬೇಕೆನ್ನುತ್ತಾರೆ. ಮಾಡಿದ ಸಂಶೋಧನೆಯು ಫಲಿತಾಂಶ ವ್ಯರ್ಥವಾದಾಗಲೂ ಸಂಶೋಧಕ ಧೈರ್ಯಗೆಡಬಾರದೆಂದು ಧೈರ್ಯದ ನೆಲೆ ತೋರಿಸುತ್ತಾರೆ.

**ವ್ಯುತ್ಪತ್ತಿ :** ಕಾವ್ಯ ಮೀಮಾಂಸೆಯಲ್ಲಿ ಕಾಣಬರುವ ವ್ಯುತ್ಪತ್ತಿ, ಪ್ರತಿಭೆ, ಕ್ರಿಯಾ ಶೀಲತೆಯೆಂಬ ಮೂರು ಅಂಶಗಳು ಸಂಶೋಧನ ಪ್ರಜ್ಞೆಗೆ ಸಂಬಂಧಿಸಿದ ಅರ್ಹತೆ ಗಳೆಂದು ಹೇಳಿ, ವ್ಯುತ್ಪತ್ತಿಯು ಅರ್ಥ ನೀಡುತ್ತಾರೆ. ಇದು ಸಂಶೋಧನೆಯ ಎಲ್ಲ ಚಟುವಟಿಕೆಗಳ ಮೂಲಧನವೆನ್ನುತ್ತಾರೆ. ಸಂಶೋಧನೆ ಅಂಕುರಿಸಿ ಚಿಗುರಿ ಹೂ ಹಣ್ಣು ಬಿಡುವುದೇ ವ್ಯುತ್ಪತ್ತಿ ಎಂಬ ನೀರು ಗೊಬ್ಬರ ಭೂಮಿಕೆಯಲ್ಲಿ ಎಂದು ಹೇಳಿ ಅನೇಕ ವಿದ್ವಾಂಸರ ಅಂತರ್ ಶಿಸ್ತೀಯ ಬರಹಗಳನ್ನು ಉದಾಹರಿಸಿದ್ದಾರೆ.

**ಪ್ರತಿಭೆ :** ಕವಿಯಲ್ಲಿ ಹೊಳೆಯುವ ಮೂಲಕಲ್ಪನೆಯಂತೆ ಸಂಶೋಧಕನಲ್ಲಿ ಮೂಲ ಊಹೆಯೊಂದು ಹೊಳೆದು, ಅದರ ಮೇಲೆ ಸಂಯೋಜನೆಯ ಬರಹ ತೊಡಗುತ್ತದೆ. ಸೃಜನ ಪ್ರತಿಭೆ ಕಾಣುವ-ಕಟ್ಟುವಲ್ಲಿ ನಿರತವಾದರೆ, ಸಂಶೋಧಕನ ಪ್ರತಿಭೆ ಕಾಣುವ ಕ್ರಿಯೆಯ ಮೇಲೆ ಒತ್ತು ಕೊಡುತ್ತದೆ, ಎನ್ನುತ್ತಾರೆ.

**ಕ್ರಿಯಾ ಶೀಲತೆ :** ಈ ಮೇಲಿನ ಐದು ಗುಣಗಳಿದ್ದೂ ನಿರಂತರ ಕ್ರಿಯಾಶೀಲತೆ ಇಲ್ಲದಿದ್ದರೆ ಸಂಶೋಧನೆಯ ಹೊಸ ಹೊಸ ಒಳನೋಟಗಳು ಗೊತ್ತಾಗದೆ ಹೋಗು ತ್ತವೆ. ಹರಿಯುವ ನೀರಿನಂತೆ ಸಂಶೋಧಕ ಚಲನಶೀಲನಾಗಿರಬೇಕು. ಇದರಿಂದ ಅವನಿಗೆ ಸಂಶೋಧನೆಯ ಶಿಸ್ತು ಪ್ರಾಪ್ತವಾಗಿ, ಅವನೊಬ್ಬ ಶಾಸ್ತ್ರಜ್ಞನಾಗುತ್ತಾನೆ ಎಂಬ ನಿರೂಪಣೆಯನ್ನು ಗಮನಿಸಬೇಕು.

**ಆಕರಗಳು**

ಇದು ಎರಡನೆಯ ಅಧ್ಯಾಯ. ಸಂಶೋಧಕನಿಗೆ ಬೇಕಾಗುವ ಆಕರಗಳ ಕುರಿತಾದ ಬೌದ್ಧಿಕ ನಿರೂಪಣೆ ಇಲ್ಲಿದೆ, ಇದರಲ್ಲಿ ಆಕರಗಳ ಪ್ರಮಾಣ ಮತ್ತು ಆಕರಗಳ ಪ್ರಾಮಾಣಿಕತೆ ಎಂಬ ಎರಡು ಭಾಗ ಮಾಡಿದ್ದಾರೆ,

**ಆಧ್ಯಾತ್ಮಿಕ** ನೆಲೆಯ ಭಾರತೀಯ ಮನಸ್ಸು ತನ್ನ ಬಗ್ಗೆ, ತನ್ನ ಸಾಧನೆಯ ಬಗ್ಗೆ ಏನೊಂದು ಹೇಳಿಕೊಳ್ಳದೆ ಎಲ್ಲಕ್ಕೂ ದೈವವನ್ನು ಹೊಣೆ ಮಾಡಿರುವುದರಿಂದ ಆಕರಗಳ ಸಾಮಗ್ರಿ ನಮ್ಮಲ್ಲಿ ಕಡಿಮೆ ಎಂಬ ಕಟು ಸತ್ಯವನ್ನು ಪ್ರಸ್ತಾವಿಸಿ, ಲೌಕಿಕ ಕೃತಿಗಳು ದೊರೆಯದ್ದು, ಧಾರ್ಮಿಕ ಕೃತಿಗಳ ಬಾಹುಳ್ಯವಿದ್ದದ್ದು, ರಾಜಾಲಯಗಳು ನಾಶವಾದದ್ದು, ದೇವಾಲಯಗಳು ಉಳಿದು ಬಂದಿದ್ದು ಮತ-ಮತ್ಸರ ರಾಜಮಾತ್ಸರ ದಲ್ಲಿ ಹಸ್ತಪ್ರತಿಗಳ ನಾಶ ಮಾಡಿದ ವಿವರ ನೀಡಿ ಆಕರಗಳ ಪ್ರಮಾಣದ ಕೊರತೆ ಯನ್ನು ವಿವರಿಸುತ್ತಾರೆ.

ಧಾರ್ಮಿಕ ಮನಸ್ಸಿನಿಂದಾಗಿ ಇತಿಹಾಸಪ್ರಜ್ಞೆ ಇಲ್ಲವಾಗಿ ಪುರಾಣಸಂಪ್ರದಾಯ ಬೆಳೆದು. ಚರಿತ್ರೆಯು ಬರವಣಿಗೆಗಳೇ ದೊರೆಯದುದ್ದು: ಮತ್ತು ಜನಸಾಮಾನ್ಯನ ಐತಿಹ್ಯ ದಂತಕತೆಗಳನ್ನು ನಿಜ ಸಾಮಗ್ರಿ ಮಾಡಿ ಐತಿಹಾಸಿಕ ವಸ್ತುವನ್ನು ಪವಾಡಮಯ ಮಾಡಿ ಕವಿಗಳು ವಿರೂಪಗೊಳಿಸಿದ ಉಲ್ಲೇಖಗಳನ್ನು ಈ ಭಾಗದಲ್ಲಿ ಉದಾಹರಣೆ ಸಹಿತ ನಿರೂಪಿಸಿದ್ದಾರೆ. ಪ್ರತಿಕಾರರ ತಪ್ಪಿನಿಂದಾಗಿ ಅಪ್ರಮಾಣಿಕ ಆಕರಸಾಮಗ್ರಿ ಉಳಿದು ಬಂದುದರ ವಿವರ ನೀಡಿ ಕೂಟ ಶಾಸನ ತಾಮ್ರ ಶಾಸನಗಳೂ ಇದೇ ಬಗೆಯಲ್ಲಿದ್ದುದರಿಂದ ಸಂಶೋಧಕನು ಅತ್ಯಂತ ಎಚ್ಚರಿಕೆಯಿಂದ ಹೆಜ್ಜೆ ಇಡಬೇಕೆನ್ನುತ್ತಾರೆ.

**ಆಕಾರಗಳ ಪ್ರಕಾರ:** ವಸ್ತುಸಾಮಗ್ರಿ, ಭಾಷಾಸಾಮಗ್ರಿ, ಕ್ರಿಯಾಸಾಮಗ್ರಿ, ಜ್ಞಾನಸಾಮಗ್ರಿಯ ಪ್ರಕಾರಗಳ ವೈಜ್ಞಾನಿಕ ವಿಶ್ಲೇಷಣೆ ಇಲ್ಲಿದೆ.

ವಸ್ತು ಸಾಮಗ್ರಿಯಲ್ಲಿ ಭೂಮಿಯ ಮೇಲಿನ ಶೋಧ ಹಾಗೂ ಭೂಮಿಯ ಒಳಗಿನ ಶೋಧ–ಈ ಎರಡೂ ಪುರಾತತ್ವ ಶೋಧಕ್ಕೆ ಸಂಬಂಧಿಸಿದುವು ಎನ್ನುತ್ತಾರೆ. ಜನಪದದ 'ಸಂಗ್ರಹ' ಕೂಡ ಇಂಥ ವಸ್ತು ಸಾಮಗ್ರಿಯಲ್ಲಿ ಬರುತ್ತದೆ.

ಭಾಷಾಸಾಮಗ್ರಿ: ಲಿಖಿತ ಮತ್ತು ಮೌಖಿಕವೆಂಬ ವಿಂಗಡಣೆ ಮಾಡಿ ಲಿಖಿತಸಾಮಗ್ರಿಯಲ್ಲಿ ೧) ದಾಖಲು ಸಾಮಗ್ರಿ ೨) ಸಾಹಿತ್ಯ ಸಾಮಗ್ರಿ ಎಂದು ಭಾಗಿಸಿ ಶಾಸನಗಳು ದಾಖಲೆಗಳಾಗಿದ್ದರೆ, ಕಾವ್ಯ–ಶಾಸ್ತ್ರಗಳು ಸಾಹಿತ್ಯ ಸಾಮಗ್ರಿಗಳಾಗಿವೆ. ಮೌಖಿಕ ಸಾಮಗ್ರಿಯಲ್ಲಿ ಭಾಷೆ ವದಂತಿ, ಐತಿಹ್ಯ, ಜನಪದಸಾಹಿತ್ಯದ ಮೂಲಕ ಸಿಗುವ ಸಾಮಗ್ರಿಯೆಲ್ಲಾ ಈ ಭಾಗದಲ್ಲಿ ಬರುತ್ತದೆ ಎಂದು ಉದಾಹರಣೆ ಸಹಿತ ವಿವರಿಸಿದ್ದಾರೆ.

ಕ್ರಿಯಾ ಸಾಮಗ್ರಿ: ದೈನಂದಿನ ಕ್ರಿಯೆ. ಆಚರಣಾತ್ಮಕ ಕ್ರಿಯೆ, ಘಟಿತ ಕ್ರಿಯೆ, ಎಂದು ಮೂರು ಬಗೆಯನ್ನು ಗುರುತಿಸಿ ಅವುಗಳ ವಿವರಣೆ ಮಾಡುತ್ತಾರೆ. ಕೃಷಿ ಕಾರ್ಯ ಅಡಗೆಯಂಥವುಗಳು ಪ್ರಯೋಜನಾತ್ಮಕವಾದ ದೈನಂದಿನ ಕ್ರಿಯೆಗಳಾದರೆ ಅರ್ಥಸಹಿತ, ಅರ್ಥ ರಹಿತವಾಗಿ ಆಚರಣೆಗೊಳ್ಳುವ ಕ್ರಿಯೆಗಳೆಲ್ಲ ಆಚರಣಾತ್ಮಕ ಕ್ರಿಯೆಗಳೆನಿಸುತ್ತವೆ. ಇವು ಜನಾಂಗಿಕ ಸಾಂಸ್ಕೃತಿಕ ಅಧ್ಯಯನದಲ್ಲಿ ಬರುತ್ತವೆಯೆಂದೂ ಅವುಗಳ ವಿವರವನ್ನು ಉದಾಹರಣೆ ಸಮೇತ ನೀಡುತ್ತಾರೆ.

ಜ್ಞಾನ ಸಾಮಗ್ರಿ: ವಿಶಿಷ್ಟಜ್ಞಾನ ಮತ್ತು ಅನುಕರಣಾತ್ಮಕ ಜ್ಞಾನವೆಂದು ವರ್ಗೀಕರಿಸಿ ಜ್ಞಾನಸಂಪತ್ತನ್ನು ಆಕರಸಾಮಗ್ರಿಯಾಗಿಸಿದ್ದಾರೆ. ಈ ಭಾಗದಲ್ಲಿ ಇನ್ನಷ್ಟು ವಿವರಣೆ ಬೇಕು ಎನಿಸುತ್ತದೆ. ಈ ಅಧ್ಯಾಯದ ಮುಂದಿನ ಭಾಗಗಳನ್ನು ನಾಲ್ಕಾರು

ಸಲವಾದರೂ ಓದಿ ಮನದಟ್ಟು ಮಾಡಿಕೊಳ್ಳಬೇಕು. ವಿಷಯ ವರ್ಗೀಕೃತವಾಗುತ್ತ ಹೋಗುತ್ತದೆ. ಶಿಸ್ತಿನ ಬರವಣಿಗೆಗೆ, ಬರಹದ ವಸ್ತುವಿನ ಸ್ವರೂಪವನ್ನು ತಿಳಿಯಲು ಈ ಆಕರಗಳ ಒಡೆಯುವಿಕೆ-ಸಹಾಯಕವಾಗುತ್ತದೆ.

ಪ್ರಾಮಾಣಿಕ ಆಕರ-ಅಪ್ರಮಾಣಿಕ ಆಕರ:

ಪ್ರಧಾನ ಆಕರ-ಪರೋಕ್ಷ ಆಕರ;

**ಆಕರದ ನೆಲೆಗಳು:** ಕೇಂದ್ರೀಯ ಹಾಗೂ ಕ್ಷೇತ್ರೀಯ ನೆಲೆಗಳು; ಆಕರ ಶೋಧ ಕ್ರಿಯೆ-ಇವು ಸಂಶೋಧಕನಿಗೆ ಮುನ್ನಡೆಯಲು ಬೇಕಾಗುವ ಅಮೂಲ್ಯ ಸಾಧನಗಳಾಗಿವೆ. ಇವುಗಳ ಪರಿಚಯಕ್ಕಿಂತ ಪುಸ್ತಕವನ್ನು ಕೈಗೆತ್ತಿಕೊಂಡು ಅಧ್ಯಯನ ಮಾಡುವುದು ಉತ್ತಮವೆಂದು ನನ್ನ ಅನಿಸಿಕೆ.

**ಸಂಶೋಧನ :**

**ಕ್ರಿಯೆ_ಪ್ರಕಾರ :** ಅಮೂಲ್ಯವಾದ ಮೂರನೆಯ ಅಧ್ಯಾಯವಿದು. ಸಂಶೋಧನೆಯ ಪ್ರಾರಂಭ ಮೂಲ ಊಹೆ, ಆಕರ, ಆಕರಸಾಮಗ್ರಿ, ದತ್ತ ಸಾಮಗ್ರಿ, ವಿಶ್ಲೇಷಣ ಕ್ರಿಯೆ, ವ್ಯಾಖ್ಯಾನ ಕ್ರಿಯೆ, ಸಂಭಾವ್ಯ ಸಂಶೋಧನೆ, ಸತ್ಯಸಂಶೋಧನೆಗಳ ಉದಾಹರಣೆಯ ಸಮೇತ ನಿರೂಪಣೆ ಇಲ್ಲಿದೆ. ಸಂಶೋಧಕರ ಬಗ್ಗೆ ಕೆಂಡಕಾರುವ ಮಂತೀಯ ಜಡರು ಇದನ್ನು ಓದಿ ನೋಡಬೇಕು. ಸಂಶೋಧಕ ತಪ್ಪು ಹೇಳಿರಬಹುದು ಸುಳ್ಳು ಹೇಳಿರಲಾರ; ಸಂಶೋಧನೆಯು ಅಲ್ಪವಿರಾಮಗಳಿಂದ ಅರ್ಧವಿರಾಮಗಳಿಗೆ, ಅರ್ಧವಿರಾಮದ ಮೂಲಕ ಪೂರ್ಣ ವಿರಾಮಕ್ಕೆ ಸಾಗುವ ಕ್ರಿಯೆಯಾಗಿದೆಯೆಂಬ ಡಾ॥ ಕಲಬುರ್ಗಿಯವರ ಮಾತುಗಳು ತುಂಬ ಮನನೀಯವಾಗಿವೆ, ಹೃದಯಕ್ಕೆ ತಟ್ಟುತ್ತವೆ.

**ಸಂಶೋಧನೆಯ ಪ್ರಕಾರಗಳು :** ವಸ್ತು ಭಾಷೆ ಕ್ರಿಯೆ ಜ್ಞಾನ ಸಾಮಗ್ರಿಗೆ ಸಂಬಂಧಿಸಿಕೊಂಡು ವಿಷಯನಿಷ್ಠ ಪ್ರಕಾರ, ಉದ್ದೇಶನಿಷ್ಠ ಪ್ರಕಾರ, ವಿಧಾನನಿಷ್ಠ ಪ್ರಕಾರ, ಸ್ವರೂಪನಿಷ್ಠ ಪ್ರಕಾರ ಎಂದು ವಿಂಗಡಿಸುತ್ತ ಸ್ವರೂಪದಲ್ಲಿ ೧) ವಿವರಣಾತ್ಮಕ ೨) ಐತಿಹಾಸಿಕ ೩) ತೌಲನಿಕ ಸಂಶೋಧನೆಯ ಮೂರು ವರ್ಗೀಕರಣ ಮಾಡುತ್ತಾರೆ. ಒಟ್ಟಾರೆಯಾಗಿ

ವಸ್ತು-ರೂಪನಿಷ್ಠ-ಗುಣನಿಷ್ಠ

ರೂಪನಿಷ್ಠ-ವಿಶ್ಲೇಷಣ—೧)ವಿವರಣಾತ್ಮಕ ೨)ಐತಿಹಾಸಿಕ ೩)ತುಲನಾತ್ಮಕ

ಗುಣನಿಷ್ಠ-ವ್ಯಾಖ್ಯಾನ—೧)ವಿವರಣಾತ್ಮಕ ೨)ಐತಿಹಾಸಿಕ ೩)ತುಲನಾತ್ಮಕ

ಈ ಚೌಕಟ್ಟಿನಂತೆ ೧)ವಸ್ತುವಿಗೆ ಅನ್ವಯಿಸಿದಂತೆ ೨)ಭಾಷೆ ೩)ಕ್ರಿಯೆ ೪)ಜ್ಞಾನಕ್ಕೂ ಆ ಆರು ಬಗೆಯ ಪ್ರಕಾರಗಳನ್ನು ಅನ್ವಯಿಸಿದರೆ ೨೪ ಪ್ರಕಾರಗಳು ಹುಟ್ಟುತ್ತವೆ. ಅವೂ ಅಲ್ಲದೆ ಅನ್ವಯಿಕ ಸಂಶೋಧನೆ (ಅಕೆಡೆಮಿಕ್ ರಿಸರ್ಚ : ಇದು ಜನಪರವಲ್ಲ

ವಿದ್ವಾಂಸವರ) ಬಹು ಶಿಸ್ತೀಯ ಸಂಶೋಧನೆ, ಸುಖ್ಯಾನಿಷ್ಠ ಸಂಶೋಧನೆ, ಮಾದರಿನಿಷ್ಠ ಸಂಶೋಧನೆ, ಘಟಕ ನಿಷ್ಠ ಸಂಶೋಧನೆ, ಸಾಂಸ್ಕೃತಿಕ ಸಂಶೋಧನೆ– ಹೀಗೆ ವಿವಿಧ ಪ್ರಕಾರಗಳನ್ನು ಗುರುತಿಸುತ್ತಾ ನಿರೂಪಿಸಿದ್ದಾರೆ. ಕೊನೆಯು ಸಾಂಸ್ಕೃತಿಕ ಸಂಶೋಧನೆಗೆ ಸಾಕಷ್ಟು ಅವಕಾಶವಿರುವ ವಿವರ ನೀಡಿದ್ದಾರೆ. ಈ ಸಾಂಸ್ಕೃತಿಕ ಶೋಧನೆಯಲ್ಲಿ ವಿಶ್ಲೇಷಣಾತ್ಮಕ ರೂಪನಿಷ್ಠ ಶೋಧನೆಯಾಗಿದೆಯೇ ಹೊರತು ವ್ಯಾಖ್ಯಾನಾತ್ಮಕ ಗುಣನಿಷ್ಠ ಶೋಧ ಆಗುವಲ್ಲಿ ಹಿಂದೆ ಬಿದ್ದಿದ್ದೇವೆ. ಸಾಮಾಜಿಕ ನ್ಯಾಯಕ್ಕೆ ಸಂಬಂಧಿಸಿ ಆಕರಗಳ ವ್ಯಾಖ್ಯಾನ ಆಗಿಲ್ಲ. ಅದು ಮುಂದು ವರೆಯುವ ಆಶೆಯನ್ನು ಇಟ್ಟುಕೊಂಡಿದ್ದಾರೆ,

## ಪ್ರಬಂಧ:

ಸಂಶೋಧಕರ ತೀವ್ರ ಗಮನ ಸೆಳೆಯುವ ನಾಲ್ಕನೆಯ ಅಧ್ಯಾಯ. ಪ್ರಬಂಧದ ಸ್ವರೂಪ, ವಿಷಯದ ಆಯ್ಕೆ, ಹೆಸರು ನೋಂದಾವಣೆ, ಆಕರ ಸಾಮಗ್ರಿ ಸಂಗ್ರಹ, ವರ್ಗೀಕರಣ, ಪ್ರಕರಣ, ಉಪಪ್ರಕರಣ, ಮಹಾಪ್ರಬಂಧದ ಕಟ್ಟಡ, ಪರಿವಿಡಿ, ಪ್ರಸ್ತಾವನೆ, ಪ್ರಕರಣ–ಉಪಪ್ರಕರಣಗಳ ವಿಭಜನೆ ಮತ್ತು ಸಂಯೋಜನೆ, ಅಡಿ ಟಿಪ್ಪಣಿ, ಸಂಕೇತ ಸಂಕ್ಷೇಪ ಸೂಚಿ, ಲೇಖನ–ಗ್ರಂಥರೂಪದ ಸಹಾಯಕ ಸಾಹಿತ್ಯ, ಅನುಬಂಧವು ಕೊನೆಯಲ್ಲಿ ಬರುವಂತೆ ಪ್ರಬಂಧವನ್ನು ಸಿದ್ಧಪಡಿಸಬೇಕು. ಇಲ್ಲಿ ವರ್ಗೀಕರಣಕ್ಕೆ ಹೆಚ್ಚು ಮಹತ್ವ ಕೊಟ್ಟಿದ್ದರ ವಿವರ ಬಂದಿದೆ.

## ಪೂರಕ ವಿಚಾರಗಳು:

ಸಂಶೋಧನೆಗೆ ಸಂಬಂಧಿಸಿ ಸೃಜನ-ವಿಮರ್ಶೆ-ಸಂಶೋಧನ ಕ್ರಿಯೆಗಳ ಕರ್ತೃಪ್ರಧಾನತೆ, ವಸ್ತು ಪ್ರಧಾನತೆಯೊಂದಿಗೆ ವಿಮರ್ಶೆಯ ಉಭಯ ಪ್ರಾಧಾನ್ಯತೆಯ ಪರಿಚಯ ಮಾಡಿಕೊಟ್ಟಿದ್ದಾರೆ. ಸಂಶೋಧನೆಯ ಭಾಷೆ ಸರಳ, ನೇರ, ನಿರ್ದುಷ್ಟ, ಕ್ರಮ ಬದ್ಧತೆಯ ಅಗತ್ಯ ನೀಡಿ ಜನಕ್ಕೆ ಮುಟ್ಟುವ ರೀತಿಯಲ್ಲಿ ಸಂಶೋಧನೆಯ ಭಾಷೆ ಇರಬೇಕೆಂಬ ವಿವರ ನೀಡಿದ್ದಾರೆ. ವೈಯಕ್ತಿಕ ಸಂಶೋಧನೆ, ಜಂಟೀ ಸಂಶೋಧನೆ, ಸಾಂಸ್ಥಿಕ ಸಂಶೋಧನೆಗಳ ಪ್ರಚಲಿತ ವ್ಯವಸ್ಥೆಯ ವಿವರ ನೀಡಿ, ಸಂಶೋಧನೆ ಸಹಾಯದ ಅಗತ್ಯ ಕುರಿತು ತುಂಬ ಮೌಲಿಕ ನಿರೂಪಣೆ ಮೂಡಿಬಂದಿದೆ. ಸಂಶೋಧನೆಯ ಅವಶ್ಯಕತೆ: ಈ ಶೀರ್ಷಿಕೆಯ ಮೂರು ಪುಟಗಳ ಬರವಣಿಗೆ ಅತ್ಯಂತ ಹೃದ್ಯವಾಗಿದೆ. ವಿದ್ಯಾರ್ಥಿಗಳು ಸಹೃದಯರು ಜಡ ಸಂಪ್ರದಾಯವಾದಿ ಗಳು ಕಣ್ತೆರೆದು ನೋಡುವಂತಹ ಅಮೂಲ್ಯ ವಿಚಾರಗಳಿಂದ ಕೂಡಿದೆ.

## ಕನ್ನಡ ಸಂಶೋಧನೆ :

ಇದು ಈ ಕೃತಿಯ ಕೊನೆಯ ಅಧ್ಯಾಯ. ಕನ್ನಡ ಸಂಶೋಧನೆಯ ಇತಿಹಾಸ ಪಾಶ್ಚಾತ್ಯರಿಂದ ಆರಂಭಗೊಂಡ ಉಲ್ಲೇಖಗಳನ್ನೊಳಗೊಂಡು ಅಂದಿನಿಂದ ಇಂದಿನ

ವರೆಗೆ ೧. ಆಕರ ಶೋಧ ೨. ಆಕರಗಳ ರೂಪ ನಿಷ್ಠ ಶೋಧ ೩. ಆಕರಗಳ ಗುಣನಿಷ್ಠ ಶೋಧ ಎಂಬ ಮೂರು ಘಟ್ಟಗಳಲ್ಲಿ ಮುಂದುವರೆದಿದ್ದರ ಇತಿಹಾಸವನ್ನು ನಿರೂಪಿಸಿದ್ದಾರೆ. **ಕನ್ನಡ ಸಂಶೋಧನೆಯ ಭವಿಷ್ಯ** ಪುಸ್ತಕದ ಕೊನೆಯಲ್ಲಿ ಬಂದ ಬಹುಮೂಲ್ಯ ಬರಹ ಕಣ್ಣೆದುರಿನ ಸಮಸ್ಯೆಗಳ ಕಡೆಗೆ ಎಲ್ಲರ ಗಮನ ಸೆಳೆಯುವ ಸಂಶೋಧನೆಯ ವಿಧಾನ, ಸಂಶೋಧನೆಯ ಕ್ಷೇತ್ರ, ಹೊಸ ತೆರನಾದ ಯಾಂತ್ರಿಕವಾದ ಅನ್ವೇಷಣಾತ್ಮಕ ಸಂಶೋಧನೆಯ ಅಗತ್ಯ, ಸಂಶೋಧನೆಯು ಜನಪರವಾಗುವುದಕ್ಕಾಗಿ ಪ್ರಸಾರ ಮತ್ತು ಪ್ರಗತಿಗಾಗಿ ಪತ್ರಿಕೆಯ ಪಾತ್ರಗಳ ಬಗ್ಗೆ ಕಳಕಳಿಯ ನಿರೂಪಣೆಯನ್ನು ಇಲ್ಲಿ ನೋಡಬೇಕು. ಗ್ರಂಥ ಪ್ರಕಟಣೆಯಲ್ಲಿಯೂ ನ್ಯಾಯ ಸಿಗದಂತಹ ಸ್ಥಿತಿ ನಮ್ಮಲ್ಲಿರುವುದರ ವಿಚಿತ್ರ ಸ್ಥಿತಿಯನ್ನು ಉದಾಹರಿಸುತ್ತಾರೆ.

ಒಟ್ಟಾರೆ ವಂಚಿತವಾಗಿರುವ ಸಾಹಿತ್ಯಕ ನ್ಯಾಯ ಮತ್ತು ಸಾಮಾಜಿಕ ನ್ಯಾಯವನ್ನು ಸಂಶೋಧಕ ಬಯಸಿದ್ದಾನೆಂಬ ಆಶೆಯೊಂದಿಗೆ ವಿದ್ಯಾರ್ಥಿ ಮತ್ತು ವಿದ್ವಜ್ಜನ ವೃಂದಕ್ಕೆ 'ಕನ್ನಡ ಸಂಶೋಧನ ಶಾಸ್ತ್ರ' ಕೃತಿಯು ಇಷ್ಟು ದಿನಗಳಿಂದ ಇದ್ದ ಕೊರತೆಯನ್ನು ತುಂಬಿ ಜ್ಞಾನ ನ್ಯಾಯ ಒದಗಿಸಿಕೊಟ್ಟಿದೆ. ●

## ಭಾರತಿ ಪಾಟೀಲ

## ನಲ್ಲೆಗಾಗಿ

"ನಿನಗಾಗಿ ನಾನೇನು ಮಾಡಲಿ, ನಲ್ಲೆ ?
ಗೋಳ ಗುಮ್ಮಟದಿಂದ ನಾ ಹಾರಬಲ್ಲೆ."

ನಲ್ಲೆ ಉತ್ತರಿಸಿದಳು ನಗುನಗುತ್ತ ಆಗ:
"ಜೀವ ವಿಮೆ ಮಾಡಿಸೋ ನಲ್ಲ ಬೇಗ." ●

# ಮೂರು ಕವನಗಳು

## ೧. ಕವಿತೆ

ಚಡ್ಡಿ ಹಾಕಿಕೊಂಡು ತಯಾರು ಮಾಡಿದ ಅಧ್ಯಾತ್ಮ
ಬಣ್ಣ ಹಚ್ಚಿ ಕೂಡಿಸಿದ ಟಿಪ್‌ಟಾಪ್ ಶರೀರ
ಶಿಸ್ತಿನಿಂದ ಕಟ್ಟಿಗೆಯ ಬಾಕಿನ ಮೇಲೆ
ಕೆಳಗಿಟ್ಟ ತಾದಾತ್ಮ್ಯ

ಒಂದು ವೇಳೆ
ಎಂದಾದರೂ ನೀವು ಅಪಮಾನುಷ ಆದರೆ
ನಿಮ್ಮ ಅಂಗಾಂಗದಿಂದ
ಹೊರ ಬರುತ್ತವೆ ಕೇವಲ ನಾಯಿ-ಬೆಕ್ಕುಗಳು
ಇಲ್ಲಾ
ಹಸಿದ ಇಲಿಗಳು

ನಾವು ಒಪ್ಪಿಕೊಳ್ಳಲಿಲ್ಲ ಗುಡಿ ಕಟ್ಟುವುದನ್ನು
ಗೊತ್ತಿತ್ತು ನಮಗೆ
ಕಲ್ಲಿನ ಕಾರಣ ಅದರಲ್ಲಿ
ನಮ್ಮೀ ಈಶ್ವರ ಅಡಕಾಯಿಸಬಹುದೆಂದು
ಮತ್ತು
ಮುಕ್ತ ಭಕ್ತರಿಗೆ
ಅಪರಾಧಿಗಳೆಂದು ಅನಿಸಬಹುದೆಂದು

ಅದಕ್ಕಾಗೇ ಜಾಹೀರ ಮಾಡಲಿಲ್ಲ
ನಮ್ಮ ಹುತಾತ್ಮ
ಹೇಳಲಿಲ್ಲ ಬ್ರಹ್ಮ ಎಲ್ಲಿ ಕದಿಯುತ್ತಾನೆಂದು
ನೇರವಾಗಿ ಆಕಾಶದ ವರೆಗೆ ಕಟ್ಟಿದೆವು
ಇರುವಿಕೆಯ ಬಾವಿ
ಮತ್ತಾದೆವು ಮುತ್ತಾತ

## ೩. ಬಳ್ಳೊಳ್ಳಿ

ನೋಡಿ, ಬಳ್ಳೊಳ್ಳಿ ಹೇಗಿರುತ್ತದೆ
ಪಕಳೆಗಳ ಮೇಲೆ
ಮೂಕ ಪಕಳೆಗಳಿಂದಾದ ಗುಚ್ಛ
ಒಂದೊಂದೇ ಶುಭ್ರ
ತನ್ನದೇ ಏಕಾಂತ ಹೆಣೆಯುತ್ತ
ಪ್ರತ್ಯಕ್ಷ ಪರಬ್ರಹ್ಮನ ತೀವ್ರ ಗಂಧ
ಮತ್ತು ಖಾರದ ರುಚಿ ಸಂಭಾಳಿಸುತ್ತ

ನೋಡಿ...
ಹೆಂಗಸು ಹೇಗೆ ಸಂಭಾಳಿಸುತ್ತಿರುತ್ತಾಳೆ
—ತನ್ನ ಅಂಗಾಂಗ
ಅವಳ ಪ್ರಚ್ಛನ್ನ ಛಿದ್ರದಲ್ಲಿ ಅಡಗಿ
ಬೆಳೆಯುತ್ತಿರುತ್ತದೆ ಜೀವನದ ತರಂಗ

ಮತ್ತು...ನಂತರ ನೀ
ಹೇ ನಪುಂಸಕ?...
ಧಾರಧಾರ ಮಾಡು ನಿನ್ನ ಖಡ್ಗ
ಪ್ರಕೃತಿಯನ್ನು ಗೆಲ್ಲುವುದಕ್ಕಾಗಿ
ಯಾಕೆ ಮೊಂಡು ಮಾಡುತ್ತಿ ಅದನ್ನು
–ಕೇವಲ ನಿನಗಾಗಿ.

## ೪. ಮೂರನೆಯ ಶರೀರ

ಎರಡು ಶರೀರಗಳ ನಡುವಿನ ಅಂತರ
ಮೂರನೆಯ ಶರೀರಕ್ಕೆ ಗೊತ್ತಾಗುವದೇ ಇಲ್ಲ
ಮೂರನೆಯ ಶರೀರ ಏಕಾಗ್ರ ಇರುತ್ತದೆ
ಸುಖದ ಸೂಜಿಯಿಂದ
...ಪೀಡೆಯನ್ನು ಹೊಲಿಯುತ್ತ.
ಅದಕ್ಕೆ ಆತ್ಮೀಯತೆಯ ಭಾಷೆ ತಿಳಿಯುವದೇ ಇಲ್ಲ.

ಅಷ್ಟೊಂದೂ ಅದೂ ತನ್ನಲ್ಲಿ ತನಗಾಗಿ ಬೇರೆ ಇರುತ್ತದೆ
ಗಾಯ ಒಣಗಿದ ಮೇಲೆ
ಶಿಲ್ಲಕ ಉಳಿಯುತ್ತದೆ—ನೆನಪಿನ ಕಲೆ
ಅಲ್ಲಿ ಚರ್ಮದ ಒಂದು ಮೂಲ ಪಟ
ಹರಿದು ಹುಟ್ಟಿರುತ್ತದೆ ಅಲ್ಲಿ
ಹೊಸ ಕೋಮಲ ಅಂಗ.
—ಗುಳಗುಳೀತ... ಕಣ್ಣಿನಂತೆ—ನೋಡಲಾಗದ್ದು.

ಮರಾಠಿಯಿಂದ ಅನುವಾದ: **ಮುಕುಂದ ಜೋಶಿ**

## ಯಶೋದ ರಾಜೇಂದ್ರ

---

## ನೆಚ್ಚು

ಸುಡು ಬಿಸಿಲಿಗೆ ಸೋತು ಸುಣ್ಣವಾದ ದಿನವನ್ನು
ಘುಟ್ಟಿಸುತ್ತಾಳೆ ನನ್ನಜ್ಜಿ;
ನನ್ನ ಕಣ್ಣಿಗೆ ಎಣ್ಣೆ ಕಾಡಿಗೆಯನ್ನು ಪೂಸಿ ಎದೆಯನ್ನು
ನೇವರಿಸುತ್ತ.

ನೆಲದ ಬಿಸಿ ನನ್ನೊಳಗೆ ಮೌನವಾಗುವ ಮೊದಲೇ
ಎಡತಾಕುತ್ತವೆ, ಅಪ್ಪ ಕಟ್ಟಿದ ಗೆಜ್ಜೆ–ಗೂಡಿನ
ಕುಸುರಿ ಧ್ವನಿಗೆ

ಗಾಢ ಕತ್ತಲೆಯಲ್ಲಿ ಮುಸುಕಿನೊಳಗೆ ಮುಚ್ಚಿಟ್ಟ ಮುದವು
ಬಿಚ್ಚಿಕೊಳ್ಳುತ್ತದೆ; ಹೆತ್ತಮ್ಮನೊಂದಿಗೆ
ಅಜ್ಞಾತದ ಬಾಳೆ ಸೇರಿ ಹೋದ ಬಗೆಗೆ,

ಬೆಳಗು ಬೈಗುಗಳಲ್ಲಿ ಬಾನು–ನೆಲೆಗಳ ಸಂಧಿಯಲ್ಲಿ
ಸಂಕ್ರಾಂತ ಸೂರ್ಯನ ನಸುನುಡಿ, ಕಣ್ಣಳತೆಗೆ ಸಿಗದ
ನನ್ನಾತನ ಎದೆಯ ಹರಹನ್ನು ಕಂಡು.

ಮುಂಗಾರುವಿನ ಕಪ್ಪು ಮೋಡಗಳ ಭಾರದಲ್ಲಿ ಬಾನು
ಕುಸಿದಾಗ: ನನ್ನ ನೆಚ್ಚು—ಅಮೃತವಾಗಿ ಇಳಿಯುತ್ತದೆ.
ಹಸುಳೆ ಸುಳಿಯ ಅಧರಕ್ಕೆ.

# ಲಿಂಬಾಳೆ ಅವರ 'ಅಕ್ರಮ ಸಂತಾನ'

## ಗಣೇಶ ಅಮೀನಗಡ

ಓದಿ ಮರೆತು ಬಿಡುವ ಅನೇಕ ಕೃತಿಗಳ ಮಧ್ಯೆ ಶರಣಕುಮಾರ ಲಿಂಬಾಳೆ ಅವರ ಆತ್ಮಕತೆ "ಅಕ್ರಮ ಸಂತಾನ" (ಅನುವಾದ : ದು. ನಿಂ. ಬೆಳಗಲಿ) ಚಿತ್ರ ಭಿತ್ತಿಯಲ್ಲಿ ಅಚ್ಚಳಿಯದೆ ಕಾಡುತ್ತಿದೆ.

ಅಭಿವ್ಯಕ್ತಿಯ ಕ್ರಮ ಎರಡು ಬಗೆಯದು ; ಸ್ವಂತ ಅನುಭವಗಳನ್ನು ನೇರವಾಗಿ, ಉತ್ತಮ ಪುರುಷದಲ್ಲಿ ಅಭಿವ್ಯಕ್ತಿಸುವುದು ಒಂದಾದರೆ, ಇನ್ನೊಂದು ಅನುಭವಗಳನ್ನು ಮುರಿದು ಕಲ್ಪನೆಯನ್ನು ಸೇರಿಸಿ, ಅದು ಬೇರೊಬ್ಬರ ಅನುಭವವೆನ್ನುವಂತೆ ನಿರೂಪಿಸುವುದು. ಲಿಂಬಾಳೆ ಮೊದಲಿನ ಕ್ರಮವನ್ನು ಅನುಸರಿಸಿದ್ದಾರೆ. ಆದರೂ ಘಟನೆಗಳ ಕಾಲಾನುಕ್ರಮಣಿಕೆಯನ್ನು ಉಳಿಸಿಕೊಳ್ಳದಿರುವುದರ ಮೂಲಕ ಸೃಜನಶೀಲತೆಯನ್ನು ತೋರಿಸಿದ್ದಾರೆ. ಹಾಗೆಯೇ ಘಟನೆಗಳ ಆಯ್ಕೆ ಕೂಡಾ ಬುದ್ಧಿಪೂರ್ವಕವಾಗಿದೆ. ಅವರು ಹಲವಾರು ಸೃಜನಶೀಲ ಕೃತಿಗಳನ್ನು ಕಟ್ಟಬಹುದಿತ್ತು. ಆದರೆ ಆತ್ಮಕತೆಯ ಮಾಧ್ಯಮದ ಆಯ್ಕೆಯ ಹಿಂದೆ ಇರುವ ಒತ್ತಡಗಳೇನು ? ಇಂಥ ಪ್ರಶ್ನೆ ನಮ್ಮ ಸಾಮಾಜಿಕ ಚರಿತ್ರೆಯತ್ತ ಪುನರ್ ಯೋಚಿಸುವಂತೆ ಮಾಡುತ್ತದೆ.

ಮರಾಠಿಯಲ್ಲಿ ಬರುತ್ತಿರುವಷ್ಟು ಆತ್ಮ ಚರಿತ್ರೆಗಳು ಉಳಿದ ಭಾಷೆಗಳಲ್ಲಿ ಬರುತ್ತಿಲ್ಲವೇಕೆ ? ಕನ್ನಡದ ಸಂದರ್ಭದಲ್ಲಂತೂ ಆತ್ಮ ಚರಿತ್ರೆಯ ಸೈದ್ಧಾಂತಿಕ ನೆಲೆಯೇ ಭಿನ್ನವಾದುದು. ಆತ್ಮ ಚರಿತ್ರೆಗಳನ್ನು ಬರೆಯುವುದು ಸಾಹಿತಿಗಳು, ಗಣ್ಯರಿಗೆ ಮಾತ್ರ ಮೀಸಲೆಂಬ ತಿಳುವಳಿಕೆಯಿದೆ. ಇದನ್ನೆಲ್ಲ ಅಳಿಸಲು ಕನ್ನಡದ ಸಂದರ್ಭದಲ್ಲಿ ಮರಾಠಿ ಆತ್ಮಚರಿತ್ರೆಗಳನ್ನು ಓದಬೇಕು. ಕನ್ನಡದ ಆತ್ಮಕತೆಗಳಲ್ಲಿ ಅನುಭವಗಳನ್ನು ದಾಖಲಿಸುತ್ತಾರೆಂದಾಗಲೂ ನಿಜವಾದ ಅನುಭವಗಳಾಗಿರುವುದಿಲ್ಲ. ಅಂದರೆ

ತಮಗಾದ ಅಪಮಾನ, ಕಹಿ ಘಟನೆಗಳನ್ನು ಮರೆಮಾಚಿ ಸಾಧನೆಗಳ ದಾಖಲೆಗಳನ್ನೇ ಕಾಣುತ್ತೇವೆ. ಆದರೆ ಲಿಂಬಾಳೆ (ಮರಾಠಿಯ ಅನೇಕ ದಲಿತ ಲೇಖಕರು) ತಮ್ಮ ಅನುಭವಗಳನ್ನು ನಿರ್ಭಿಡೆಯಿಂದ ದಾಖಲಿಸುತ್ತ ನಮ್ಮನ್ನು ಬೆಚ್ಚಿಬೀಳಿಸುತ್ತಾರೆ.

'ಅಕ್ರಮ ಸಂತಾನ' ನನ್ನನ್ನು ಯಾಕೆ ಕಾಡುತ್ತಿದೆ? ಸಂತಾನ ಅಕ್ರಮವಾಗಿದ್ದರ ಸಲುವಾಗಿಯೆ! ಇದು ಮಜಕ್ಕೆಂದು ಹೇಳಿದ್ದಲ್ಲ. ಶ್ರೇಷ್ಠ ಸಾಹಿತ್ಯವೆನಿಸಿಕೊಂಡಿದ್ದೆಲ್ಲ ಈ ಹಿನ್ನೆಲೆಯಲ್ಲಿಯೆ ಅಲ್ಲವೆ? ಮಹಾಭಾರತದಿಂದ ಅಕ್ರಮ ಸಂತಾನದ ವರೆಗೆ ನಿದರ್ಶನಗಳು ಸಿಗುತ್ತವೆ.

'ಸಾಂಸ್ಕೃತಿಕ ಮೌನ'ದಿಂದ ಬರಹ ರೂಪಕ್ಕಿಳಿದ ದಲಿತರ ಬದುಕನ್ನು 'ಅಕ್ರಮ ಸಂತಾನ'ದಂಥ ಆತ್ಮಕತೆಗಳಲ್ಲಿ ಕಾಣುತ್ತೇವೆ ಕನ್ನಡದ ದಲಿತ ಲೇಖಕರು ಅನುಭವಿಸಿದ ನೋವನ್ನು ದಾಖಲಿಸುವಾಗ ಸಮಷ್ಟಿ ರೂಪದಲ್ಲೆ, ಅಂದರೆ ಸೃಜನಶೀಲ ಕಥೆ, ಕಾದಂಬರಿಗಳಾಗಿ ಅಭಿವ್ಯಕ್ತಿಸುತ್ತಾರೆ. ಆದರೆ ಮರಾಠಿ ಆತ್ಮಕತೆಗಳಲ್ಲಿ ಖಾಸಗಿ ಬದುಕಿನ ಅನುಭವವೇ ಸಮುದಾಯದ ಅನುಭವದಂತೆ ಪರಿಣಾಮಕಾರಿಯಾಗಿರುತ್ತದೆ. ಇಂಥ ಬರವಣಿಗೆಯ ಅಭಿವ್ಯಕ್ತಿಯ ಮೂಲಕ ಹಗುರಾಗುವುದೆ? ಹೀಗಾದರೆ ಪ್ರಕಟಣೆಯ ನಂತರ ಕುಟುಂಬದವರ ಪ್ರತಿಕ್ರಿಯೆ ಯಾವುದು? ಲಿಂಬಾಳೆಯವರನ್ನೇ ಮಾದರಿಯಾಗಿಟ್ಟುಕೊಂಡರೆ ಅವರು ಅನುಭವಿಸಿದ ಸಮಸ್ಯೆಗಳು ಅನೇಕ.

'ಒಂದು ತೊಲ ಬಂಗಾರದ ತೂಕ ಬಾರಾಮಾಶಿ ಅಂದರೆ ಹನ್ನೆರಡು ಮಾಶಿ. ಅಕ್ಕರಮಾಶಿ ಎಂದರೆ ಕಡಿಮೆ ತೂಕ ಹನ್ನೊಂದುಮಾಶಿ, ಅಕ್ರಮ ಸಂತಾನ. ವಿವಾಹ ಬಾಹ್ಯ ಸಂತಾನಗಳಿಗೆ 'ಅಕರಮಾಶಿ' ಎಂದು ಹೇಳುವ ರೂಢಿ ಮರಾಠಿಯಲ್ಲಿದೆ "(ಪು VII), ಈ ಅಕರಮಾಶಿ ರೂಪಕವೇ ಇಡೀ ಕೃತಿಗೆ ಆಯಾಮವೊಂದನ್ನು ಕೊಡುತ್ತದೆ.

ಅಕ್ರಮ ಸಂತಾನ ಆರಂಭವಾಗುವುದೇ ಆಹಾರದ ಅಸಮಾನತೆಯಿಂದ. ನನಗೆ ಮತ್ತೆ ಮತ್ತೆ ಕಾಡುವುದು ಸಂತಾಮಾಯಿ (ಲಿಂಬಾಳೆ ಅಜ್ಜಿ) ಸೆಗಣಿಯಿಂದ ಜೋಳವನ್ನಾಯ್ದು ರೊಟ್ಟಿಮಾಡಿಕೊಳ್ಳುವುದು. ಪ್ರಾಣಿಗಳಿಗೆ ದಕ್ಕಿದ ಕಾಳು ಮನುಷ್ಯರಿಗೆ ಸಿಗದಿರುವ ಸ್ಥಿತಿ ಯಾವ ಬಗೆಯದು ? ದನಗಳು ಅರಗಿಸಿಕೊಳ್ಳದೆ ಬಿಟ್ಟ ಕಾಳನ್ನು ಹೆಕ್ಕಿ ತಿನ್ನುವ ಜನರಿರುವುದು ಕಂಡಾಗ ನಾವು ಉಣ್ಣುವ ಅನ್ನ ನಮ್ಮದೆ ? ಕದ್ದ ಬಾಳೆಹಣ್ಣು ದಕ್ಕದೇ ಹೋದಾಗ ಬಾಳೆ ಹಣ್ಣಿನ ಸಿಪ್ಪೆಯಿಂದ ಸತ್ತ ದನ ತಿನ್ನುವುದರವರೆಗೂ ಹಸಿವು ಹಲವು ರೂಪ ಪಡೆಯುತ್ತದೆ.

ಹಸಿವು ಮತ್ತು ಕಾಮ ಎರಡೂ ಒಟ್ಟಿಗೆ ನಿರ್ವಹಿಸುವುದನ್ನು ಪಠ್ಯ (Text) ಹಾಗೂ ಸಂದರ್ಭ (cotext) ಗಳೆರಡರಲ್ಲೂ ಚರಿತ್ರೆಯಿಂದಲೇ ಕಾಣುತ್ತ ಬಂದಿದ್ದೇವೆ. ಅಂದರೆ ಮನುಷ್ಯನ ಬದುಕಿನ ಸ್ವಾಸ್ಥ್ಯವನ್ನು ಕಾಪಾಡಬಲ್ಲ ಅಥವಾ ನಾಶಮಾಡಬಲ್ಲ ಎರಡೂ ಪ್ರಬಲ ಶಕ್ತಿಗಳಾದ ಹಸಿವು ಮತ್ತು ಕಾಮಗಳಲ್ಲಿ ಈ ಆತ್ಮಕತೆ ಸಹಜವಾಗಿಯೇ ಹಸಿವಿಗೆ ಒತ್ತುಕೊಟ್ಟಿದೆ. ಏಕೆಂದರೆ ಹಸಿವಿನ ಪೂರೈಕೆಯಾಗಲು ಆರ್ಥಿಕ ಸಂಪನ್ಮೂಲಗಳು ಅಗತ್ಯ. ಆದರೆ ಯಾವುದೇ ಸಮುದಾಯದಲ್ಲಿ ಗಂಡು ಹೆಣ್ಣುಗಳ ಸಂಖ್ಯೆಯೂ ಸಮಪ್ರಮಾಣದಲ್ಲಿ ಇರುವುದರಿಂದ ಕಾಮದ ಅಗತ್ಯಗಳ ಪೂರೈಕೆಯು ಹಸಿವಿನ ಪೂರೈಕೆಯಷ್ಟು ಕಷ್ಟವಾಗುವುದಿಲ್ಲ. ಪ್ರೇಮ ಎಂದು ಕರೆಯಲಾಗುವ ಭಾವನಾತ್ಮಕ ಅನುಭವವು ಅನೇಕ ಸಾಮಾಜಿಕ, ಆರ್ಥಿಕ ಕಾರಣಗಳಿಂದ ದಲಿತರ ತೆಕ್ಕೆಗೆ ನಿಲುಕದೆ ಇರಬಹುದು. ಅಕ್ರಮ ಸಂತಾನದ ನಾಯಕನಿಗೂ ಕೂಡಾ ಇದೇ ರೀತಿ ಆಗುವ ಪ್ರಸ್ತಾಪ ಬರುತ್ತದೆ. ಆದರೆ ಅವನು ತನ್ನ ಪ್ರೇಮಭಂಗವನ್ನು ಮಹತ್ವದ ಸಂಗತಿ ಎನ್ನುವಂತೆ ಬೆಳೆಸುವುದಿಲ್ಲ, ನಮ್ಮ ನವ್ಯ, ದಲಿತ ಹಾಗೂ ಬಂಡಾಯ ಸಾಹಿತ್ಯಗಳಲ್ಲಿ ಕಾಮದ ಸಂಬಂಧಗಳನ್ನು ಇತರ ಸಂಬಂಧಗಳ ಜೊತೆ ಜೊತೆಗಿಟ್ಟು ನೋಡಲಾಗುತ್ತದೆ. ಅಕ್ರಮ ಸಂತಾನದಲ್ಲಾದರೆ ಹಸಿವು ಕೇಂದ್ರಸ್ಥಾನವನ್ನು ಪಡೆಯುತ್ತದೆ.

ತಾಯಿ ಮಾಸಾಮಾಯಿಯಿಂದ ಬೇರಾಗಿ, ಅಜ್ಜಿ ಸಂತಾಮಾಯಿಯೊಡನೆ ಮತ್ತೆ ಅಜ್ಜನಂತಿರುವ ದಾದಾನೊಟ್ಟಿಗೆ ಲಿಂಬಾಳೆ ಬೆಳೆಯುತ್ತಾರೆ. ಅನೇಕ ತಿರುವುಗಳ ಮಧ್ಯ ಹಿಂಸೆಯಿಂದ ಅನೇಕ ಮಗ್ಗುಲುಗಳನ್ನು ದಾಟುತ್ತಾರೆ ನಿಜ, ಅವರಿಗೀಗ ಕಾಡುತ್ತಿರುವ ಪ್ರಶ್ನೆಯೆಂದರೆ "ದಾದಾ ಸತ್ತರೆ ಆತನ ಶವಪೆಟ್ಟಿಗೆಯನ್ನು ಯಾರು ಎತ್ತುವರು ? ಮುಸಲ್ಮಾನರು ಹೇಗೆ ಬರುವರು ? ಹೊಲೆಯರಂತೂ ದಾದಾನ ಮಣ್ಣು ಹೇಗೆ ಮಾಡುವರು ? ಆದರೆ ದಾದಾನನ್ನು ಎಲ್ಲಿ ಹೂಗಿಯುವುದು ? ದಾದಾನ ಹೆಣದ ಸ್ಥಿತಿ ಹೇಗೆ ? ಕಾಕಾನ ಹೆಣದ ಸ್ಥಿತಿ ಹೇಗೆ ? ಇವರ ಸ್ಮಶಾನವೆಲ್ಲಿ ? ಸಂತಾಮಾಯಿ, ಮಾಸಾಮಾಯಿ ಇವರ ಮಣ್ಣಿಗೆ ಜನರು ಬರಬಹುದೆ ? ಈ ವ್ಯವಸ್ಥೆಯ ಚಕ್ರವ್ಯೂಹ ಏಕೆ ರಚಿತವಾಗಿದೆ ? ಈ ನೀತಿ ಅನೀತಿಗಳನ್ನು ಯಾರು ನಿರ್ಮಿಸಿದರು ? ನನ್ನ ಹುಟ್ಟು ಅನೈತಿಕ ಎಂದು ನಿರ್ಧರಿಸಿದ ಬಳಿಕ ನಾನು ಯಾವ ನೀತಿಯನ್ನು ಪಾಲಿಸಬೇಕು" (ಪು ೧೫೨) ಈ ಪ್ರಶ್ನೆಗಳು ಲಿಂಬಾಳೆಯೊಬ್ಬರದಲ್ಲ, ಲಿಂಬಾಳೆಯೊಬ್ಬರೇ ಕೇಳುತ್ತಿಲ್ಲ, ಅನೇಕ ಜನಾಂಗಗಳೆ ಕೇಳುವ, ಕೇಳುತ್ತಿರುವ ಪ್ರಶ್ನೆಗಳು.

ಹೀಗೆ ಪ್ರಶ್ನೆಗಳನ್ನು ಕೇಳಿಕೊಳ್ಳಲು, ಕೇಳಲು ಸಾಧ್ಯವಾದದ್ದು ಜ್ಞಾನದ ಮೂಲಕ. ಜ್ಞಾನದಿಂದ ಜೀವನ ಕ್ರಮವೇ ಬದಲಾಗುವುದರ ಜೊತೆಗೆ ಸ್ವಾಭಿಮಾನ ಬೆಳೆಯು

ವುದು, ಹಾಗೆಯೇ ತನ್ನವರನ್ನು ಕುರಿತು ಕೀಳರಿಮೆ ಬರುವುದು ಸಹಜ ಕೂಡಾ, (ಪು ೧೧೮) ಪೂರ್ವಜರ ನೆನಪುಗಳು, ಬಾಲ್ಯದ ಹಾಗೂ ತಾರುಣ್ಯದ ಅನುಭವ ಗಳನ್ನು ದಾಖಲಿಸುವ ಚಿತ್ರಗಳ ಸಂಕಲನವಾಗಿರುವ ಅಕ್ರಮ ಸಂತಾನದಲ್ಲಿ ಲಿಂಬಾಳೆ ಬಳಸುವ ಭಾಷೆ ಜವಾರಿಯದು.

ಅಕ್ರಮ ಸಂತಾನ ಓದುವಾಗ ಮೊಗಳ್ಳಿ ಗಣೇಶ್‌ರವರ 'ಮುಚ್ಚೆ' ಕತೆ (ಲಂಕೇಶ್ ಪತ್ರಿಕೆ, ೯೩ ಜೂನ್ ೧೬ ಮತ್ತು ೩೦) ನೆನಪಾಗುತ್ತಿದೆ. ಮಹರ್ ಜನಾಂಗದ ಕುರುಹು ಹಚ್ಚೆ ಸರೋಜಿನಿಯ ಎದೆಯಲ್ಲಿ ಉಳಿದರೆ, ಅವಳ ಮಗ ಓಡಿ ಹೋಗುವ ಮುನ್ನ ಕಚ್ಚಿದ ಮುಚ್ಚೆ. ಹೀಗೆ ಮುಚ್ಚೆ ಹಾಗೂ ಹಚ್ಚೆ ಗಳೆರಡೂ ಗಮನ ಸೆಳೆಯುತ್ತವೆ. ಮುಚ್ಚೆ ಪ್ರತಿಮೆಯಾಗಿ ಕತೆಯುದ್ದಕ್ಕೂ ಬೆಳೆಯುತ್ತದೆ, ಗಮನಿಸಬೇಕಾದ ಅಂಶ ವೆಂದರೆ ಮರಾಠಿ ದಲಿತ ಲೇಖಕರು ಪ್ರಧಾನ ಧಾರೆಯೊಂದಿಗೆ(Mainstream) ಸೇರುವುದಿಲ್ಲ, ಸೇರಿದರೂ ತಡವಾಗಿ ಸೇರುತ್ತಾರೆ. ಆದರೆ ಕನ್ನಡದ ದಲಿತ ಲೇಖಕ ರಿಗೆ ಪಠ್ಯ(Text) ಹಾಗೂ ಸಂದರ್ಭ (context)ಗಳೆರಡರಲ್ಲೂ ಪ್ರಧಾನಧಾರೆಗೆ ಸೇರಿಕೊಳ್ಳುವುದೇ ಮಹತ್ವಾಕಾಂಕ್ಷೆಯಾಗಿರುತ್ತದೆ. ಇದಕ್ಕೆ ಮುಚ್ಚೆ ಕತೆ ನಿದರ್ಶನ. ಸರೋಜಿನಿಯ ಅಪ್ಪ ಬೌದ್ಧ ಧರ್ಮ ಸೇರುವುದು ಸರೋಜಿನಿ ಕ್ರಿಶ್ಚಿಯನ್ ದವನಾದ ಆನಂದನೊಟ್ಟಿಗೆ ಬದುಕುವುದು.

ಅಕ್ರಮ ಸಂತಾನದಂತಹ ಕೃತಿಗಳು ನಿರ್ಲಕ್ಷಿತ ಜನಾಂಗದ ಸಾಮಾಜಿಕ, ಆರ್ಥಿಕ ಚರಿತ್ರೆಗಳನ್ನು ಭಿನ್ನ ನೆಲೆಗಳಲ್ಲಿ ದಾಖಲಿಸುತ್ತವೆ. ಕನ್ನಡದ ಕಥಾಸಾಹಿತ್ಯದ ರೂಪ ದಲ್ಲಿ ಇಂತಹ ಚರಿತ್ರೆಗಳು ದಾಖಲಾಗುತ್ತಿರುವುದನ್ನು ಗಮನಿಸಬಹುದು. ಅಕ್ರಮ ಸಂತಾನ ಈ ದೃಷ್ಟಿಯಿಂದ ಒಂದು ಆತ್ಮಚರಿತ್ರೆಯೇ ಆಗಿ ಮಹತ್ವದ್ದು ಅನಿಸುತ್ತದೆ. ಕನ್ನಡದಲ್ಲಿ ಈ ಮಾದರಿಯ ಆತ್ಮಚರಿತ್ರೆಗಳು ಬರದೇ ಇರುವುದಕ್ಕೆ ಕಾರಣಗಳನ್ನು ಇಲ್ಲಿ ಹುಡುಕಬಹುದು. ●

## ಕಳೆದು ಹೋದ ಪದ್ಯಗಳು: ಸುಮಿತ್ರ ಹಲವಾಯಿ

(ಅನನ್ಯ ಪ್ರಕಾಶನ, ಧಾರವಾಡ ೧೯೮೯)

## ನೊಲಾಯಿಸ್ ಮತ್ತು ಇತರ ಕವನಗಳು: ಸುಮಿತ್ರ ಹಲವಾಯಿ

(ಪ್ರೀತಿ ಪ್ರಕಾಶನ. ಧಾರವಾಡ ೧೯೯೦)

ಸುಮಿತ್ರ ಹಲವಾಯಿಯವರು ತಾವು 'ಪ್ರಣಯ' ಅಥವಾ 'ಬಂಡಾಯ'ಗಳಿಗೆ ಪರಿಮಿತಿಗೊಳ್ಳದೆ ಎಲ್ಲ ಬಗೆಯ ವಸ್ತು-ಭಾವಗಳಿಗೆ ಸ್ಪಂದಿಸುವ ಕವಿಯೆಂದು ಹೇಳಿಕೊಂಡಿದ್ದಾರೆ. ಹೀಗಾಗಿ 'ನಮ್ಮ ನಾಡು' ವಿನಂಥ ಸ್ವವೈಭವೀಕರಣದ ದೇಶಭಕ್ತಿ ಗೀತೆಗಳಿಂದ ಹಿಡಿದು, 'ಕಾಳಿಭದ್ರೆಯರು ನೀವಾಗಿ ರಕ್ಷಾಡಿಸೊದೆಯಿರಿ ನೀಚ ಕಾಮಾಂಧಕುನ್ನಿಗಳ, ಏಳಿ ಎದ್ದೇಳಿ' ಎಂದು ಕರೆಕೊಡುವ ಘೋಷಣಾಗೀತೆಗಳ ವರೆಗೆ ಅಥವಾ 'ದೇವ ನೀನೆ ನಿತ್ಯಸತ್ಯ ಜಗವು ಎಲ್ಲ ಮಾಯೆಮಿಥ್ಯ' ಎಂಬ ತತ್ವ ಜ್ಞಾನದವರೆಗೆ–ಎಲ್ಲ ಬಗೆಯ ಪದ್ಯಗಳೂ ಅವರಲ್ಲಿವೆ. ಖಚಿತ ತಾತ್ವಿಕ ನೆಲೆಯೊಂದು ಕವಿಯಲ್ಲಿ ಸ್ಥಿರಗೊಳ್ಳದಿದ್ದರೆ, 'ಯಾವುದಕ್ಕೂ ಬಂಧಿಸಿಕೊಳ್ಳಲಾರೆ'ನೆಂಬ ಉದಾರತೆ ವೈಚಾರಿಕ ಭೋಳೆತನವಾಗುವ ಸಾಧ್ಯತೆಯಿದೆ. ಇದರರ್ಥ ಸುಮಿತ್ರ ಬಾಲಿಶ ಕವಿಯಲ್ಲ. ಆದರೆ ಎಂದೆಂದೋ ಬರೆದ ಪದ್ಯಗಳನ್ನು ವಿವೇಚನೆಯಿಲ್ಲದೆ ಒಟ್ಟಿಗೆ ಪ್ರಕಟಿಸಿ ಗೊಂದಲವುಂಟು ಮಾಡಿದ್ದಾರೆ. ಅವರಲ್ಲಿ ನಿಜವಾಗಿಯೂ ವೈಚಾರಿಕ ನಿರ್ಭಿಡೆಯಿದೆ; ಪದಗಳಲ್ಲಿ ಆಟವಾಡಬಲ್ಲ, ಹಾಸ್ಯದ ಲವಲವಿಕೆಯಿಂದ ಹಗುರಾಗಿ ಬರೆಯಬಲ್ಲ, ಜಾಣತನವಿದೆ, ಲಯಗಾರಿಕೆಯ ಪ್ರಯತ್ನವಿದೆ. ಬಹುಶಃ ಆಕ್ರೋಶ–ಭಾವುಕತೆಗಳು ತುಸು ಹೆಚ್ಚಾಗೇ ಇವೆ. ಕವಿತೆ ಕಟ್ಟಲು ಬೇಕಾಗುವ ಈ ಎಲ್ಲ ಪರಿಕರಗಳು ಇದ್ದರೂ, ಗಂಭೀರವಾಗಿ ತೊಡಗಿಕೊಂಡು ತಾತ್ವಿಕವಾಗಿ ಆಳವಾದುದನ್ನು ಬಗೆದು ಸೂಕ್ಷ್ಮರೀತಿಯಲ್ಲಿ ಪ್ರಕಟಿಸುವ ಮಹತ್ವಾಕಾಂಕ್ಷೆ ಅವರಲ್ಲಿ ಕಡಿಮೆಯಿದೆ. ಕಂಡದ್ದನ್ನೆಲ್ಲ ಕುರಿತು ಬರೆವ, ಬರೆದದ್ದನ್ನೆಲ್ಲ ಪ್ರಕಟಿಸುವ ಉತ್ಸಾಹಕ್ಕೆ ಬದಲು 'ಆಯ್ಕೆ'ಯ ಸಾವಧಾನವಿದ್ದಲ್ಲಿ ಅವರೊಳಗಿವ ಪ್ರತಿಭೆ ಪ್ರಬುದ್ಧವಾದುದನ್ನು ಕೊಡಬಲ್ಲದು. ಈ ಗಲಾಟೆಯಲ್ಲೂ 'ಪಾಡಾದ ಹಾಡುಗಳಲ್ಲಿ' 'ಚೆನ್ನ ನೀ ಬರುವೆಯೆಂದು' ಮೊದಲಾದ ಕವಿತೆಗಳು ಯಾಕೆ ಪ್ರಿಯವಾಗುತ್ತವೆಂದರೆ, ಅಲ್ಲಿ ಸುಮಿತ್ರ ಸಹಜವಾಗಿ ಯಾವ ಕೃತಕ ಆದರ್ಶಗಳೂ ಇಲ್ಲದೆ ತನ್ಮಯರಾಗಿ ಬರೆದಿದ್ದಾರೆ. ತಮ್ಮ ಒಳಗಿನೊಳಗಿನ ಭಾವನೆಯ ನಿಜಗಳಿಗೆ ತೆರೆದುಕೊಂಡಿದ್ದಾರೆ. ಅವರ ಕವಿತೆ

ಬಹಿರ್ಮುಖವಾದಾಗಲೆಲ್ಲ-ಅದು ಗಂಡಂದಿರ ಸ್ವಭಾವವನ್ನು ಗೇಲಿ ಮಾಡುವ ವಿಡಂಬನೆಯಿರಲಿ-ವರದಕ್ಷಿಣೆ ಬಸವಿ ಪದ್ಧತಿಗಳಂಥ ಸಮಸ್ಯೆಗಳಿಗೆ ವ್ಯಂಗ್ಯದಲ್ಲಿ ಸಿಡಿಯುವಿಕೆಯಿರಲಿ–ಕಳೆದುಕೊಳ್ಳುವ ಆತ್ಮೀಯ ಗುಣವನ್ನು ಇಂಥ ಕವಿತೆಗಳಲ್ಲಿ ಪಡೆದಿವೆ ತನ್ನ ಪುಟ್ಟದಾದ ಸ್ವಂತವಾದ ಜಗತ್ತು ಇಲ್ಲಿ ತೆರೆಯುತ್ತದೆ. ಇವರ ಕಾವ್ಯಕ್ಕೆ ವೈಚಾರಿಕವಾದ ಆಯಾಮ ಬೇಕಾಗಿಲ್ಲವೆಂದಲ್ಲ. ಅದು ಪ್ರತಿಕ್ರಿಯಾ ಮಟ್ಟದಲ್ಲಿ ಟೀಕೆಯಂತೆ ಉಳಿಯಬಾರದು. ಬಿಡುಗಡೆಯ ಹಂಬಲವನ್ನು ಎಲ್ಲ ಲೇಖಕಿಯರೂ ವ್ಯಕ್ತಮಾಡುತ್ತಿದ್ದಾರೆ. ಇದೇನು ಹೊಸತಲ್ಲ. ವಿಮುಕ್ತಿ ಬರೇ ಸ್ತ್ರೀಗಲ್ಲ. ಬಂಧಿಸಿದ ಗಂಡೂ ಕ್ಷುದ್ರನಾಗಿರುವುದರಿಂದ ಈ ಇಬ್ಬರನ್ನೂ ಒಳಗೊಂಡ ಒಟ್ಟು ಪರಿಸರವೇ ಬದಲಾಗಬೇಕಿದೆ. ಹೀಗಿದ್ದೂ ಸುಮಿತ್ರ 'ನೀ ರಾಮಚಂದ್ರನೇ ಹೇಳು ?' ಎಂದು ಪ್ರಶ್ನಿಸಿರುವುದು. ತನ್ನನ್ನೂ ದ್ರೌಪದಿ ಜತೆ ಗುರ್ತಿಸಿಕೊಳ್ಳುವುದು ಸಹಜವಾಗಿದೆ, ಸಂಸ್ಕೃತದಲ್ಲೂ ಸುಮಿತ್ರ ಪರಿಣತರು ಎಂದು ಪರಿಚಯದಲ್ಲಿದೆ. ಆದರೆ ಸಂಸ್ಕೃತ ಸಾಹಿತ್ಯವು (ಅಲ್ಲಿನ ಪ್ರಸಿದ್ಧ ಸುಭಾಷಿತಗಳೂ ಸೇರಿ) ಒಂದು 'ವರ್ಗ'ದ ಆಶಯವನ್ನೊಳಗೊಂಡಿದೆ. ಬರೀ ಆದರ ಚಲುವಿಗೆ ಮರುಳಾಗಿ ಬಿಟ್ಟರೆ ಕಷ್ಟ. ಉದಾ: ಇವರು ಉಲ್ಲೇಖಿಸುವ 'ಸಾಹಿತ್ಯ ಸಂಗೀತ ಕಲಾವಿಹೀನನು ಬಾಲಕೊಂಬುಗಳಿಲ್ಲದ ಪ್ರಾಣಿಯಿದ್ದಂತೆ' ಎಂಬ ಶ್ಲೋಕ. ಇದು ಅಕ್ಷರ ವಂಚಿತ ದುಡಿವ ಸಮುದಾಯದ ವಿಡಂಬನೆ ಮಾಡುತ್ತಿರುವ, ಸಂಸ್ಕೃತಿ ನಾಗರಿಕತೆಗಳನ್ನು (ಇವರ ದುಡಿಮೆಯ ಕಾರಣದಿಂದಲೇ) ಹೊಂದಿರುವ ವಿಲಾಸಿಯೊಬ್ಬನ ಗರ್ವದ ಠೇಂಕಾರದಂತೆ ಕೂಡ ಭಾಸವಾಗುತ್ತದೆ. ಕವಿತೆ 'ಸ್ವಾಂತ ಸುಖಾಯ'ಕ್ಕೆ ಮಾತ್ರವೆಂಬ ಹಳೇ ಮಾಮೂಲಿ ಸುಳ್ಳೊಂದನ್ನು ಸುಮಿತ್ರ ಹೇಳಿದ್ದಾರೆ. ಅದನ್ನು ನಂಬಬೇಕಿಲ್ಲ.

ಅವರ ಎರಡನೇ ಸಂಕಲನದಲ್ಲಿ ಮೊದಲ ಸಂಗ್ರಹದ ಅಂತರ್ಮುಖತೆ ಆಪ್ತತೆಗಳು ಇನ್ನೂ ಕಡಿಮೆಯಾಗಿವೆಯೆನಿಸುತ್ತದೆ. ಇಲ್ಲಿ ಫೊಲಾಯಿಸ್, ಲಿಂಕನ್, ಮಂಡೇಲಾ, ಗೇಲಿಲಿಯೊ ಹೀಗೆ ಜಗತ್ತಿನ ವಿಚಾರವಂತ ಮಾನವತಾವಾದಿ, ಹೋರಾಟಗಾರ ಚೇತನಗಳನ್ನು ಕುರಿತು ವ್ಯಕ್ತಿಚಿತ್ರಗಳಿವೆ. ಇವರ ಚಿಂತನೆಯ ದಿಕ್ಕನ್ನು ಈ ಪದ್ಯಗಳು ಖಂಡಿತವಾಗಿ ಸೂಚಿಸುತ್ತಿವೆ. ಆದರೆ ಲಂಚಗುಳಿತನ, ಪುಢಾರಿತನ, ಭ್ರಷ್ಟಾಚಾರಗಳನ್ನು, ನವ್ಯಕಾವ್ಯ ಅಥವಾ ನಮ್ಮ ಪ್ರಜಾಪ್ರಭುತ್ವದ ವೈಖರಿಯನ್ನು ವಿಡಂಬನೆ ಮಾಡಿರುವ ಕಡೆ ಜರಿದುನಿಂದಿಸಿ ಪಾರಾಗುವ ಸಿನಿಕ ಗುಣವಿದೆ. ಈ ಕವಿತೆಗಳು ರಂಜನೆಯ ಮಟ್ಟಕ್ಕೆ ನಿಂತಿವೆ. ಸುಮಿತ್ರಾ ಅವರು ತಮ್ಮ ಕವಿತೆಯ 'ಶಕ್ತಿ'ಯು (ಅದು ಇದೆ) ನಿಜವಾಗಿ ಎಲ್ಲಿ ಸಾಧ್ಯಗೊಳ್ಳುತ್ತಿದೆ ಎಂಬುದನ್ನು ಗುರುತಿಸಿಕೊಳ್ಳಬೇಕಿದೆ.

*

## ಚುಕ್ಕಿಗಳು: ಪ್ರೇಮಾ ಸಿರ್ಸೆ

(ಆನಂದ ಪ್ರಕಾಶನ, ಬೀದರ ೧೯೯೦)

ಇಲ್ಲಿನ ಪದ್ಯಗಳು ಹನಿಗವಿತೆಗಳಂತಿದ್ದರೂ ಹನಿಗವಿತೆಗಳಲ್ಲ. ಒಂದೊಂದೇ ಪದವನ್ನು ಒಂದುಸಾಲಂತೆ ಜೋಡಿಸಿ ಬರೆವ ಸಣ್ಣಪದ್ಯಗಳು ಎನ್ನಬಹುದು. ಈ 'ರೂಪ'ದಿಂದ ಬಹಳ ಪ್ರಯೋಜನವಾಗಿದೆಯೆಂದೇನೂ ಅನಿಸುವುದಿಲ್ಲ. ಸಣ್ಣ ಪದ್ಯಗಳ ಸ್ವಭಾವವೆಂದರೆ ಮಹತ್ವಕಾಂಕ್ಷೆಯಿಲ್ಲದೆ ತೊಂಡುದನದಂತೆ ಚಂಚಲವಾಗಿ ಅಲ್ಲೂ ಒಂದು ಬಾಯಿ ಇಲ್ಲೂ ಒಂದು ಬಾಯಿ ತಿನ್ನುತ್ತಾ ಅಲೆಯುವುದು. ಇವುಗಳ ಬೆನ್ನುಹತ್ತಿ ಹೋದರೆ ತುಸು ಚಿಂತನೆ ತುಸು ಉಲ್ಲಾಸ, ಒಂದುಚೂರು ರಂಜನೆ ಹೀಗೆ ಎಲ್ಲವೂ ತುಂಡಾಗಿ ಸಿಗುತ್ತದೆ. ಇಲ್ಲಿನ ಕವಿತೆಗಳು ಕಲ್ಪನೆಯ ರೂಪದಂತಿಲ್ಲ. ಹೀಗಾಗಿ ನಿಸರ್ಗದ ವರ್ಣನೆಗಳಂತವು ಇಲ್ಲ. ಬದಲಿಗೆ ಬದುಕಲ್ಲಿ ಕಣ್ತೆರೆದು ನೋಡಬಲ್ಲ ಮನಸ್ಸೊಂದು ಕಾಮೆಂಟ್ ಮಾಡುತ್ತಾ ಹೋದಂತಿದೆ. ಆದರೆ ಪ್ರೇಮಾ ಅವರದು ಸೆಕ್ಯುಲರ್ ಮನಸ್ಸು-ಆಸ್ತಿಕ ನಂಬಿಗೆಗಳಿದ್ದರೂ. ಇದು ಬಹು ಮುಖ್ಯ ಸಂಗತಿ. ಹಾಗೆ ಕಂಡರೆ ನಿಜವಾದ ಆಸ್ತಿಕ ಮನಸ್ಸು ಮನುಷ್ಯವಾದಿಯೂ ಕೋಮು ವಿರೋಧಿಯೂ ಆಗಿರುತ್ತದೆ. ಕೋಮುವಾದವೇ ಯಾವಾಗಲೂ 'ಧಾರ್ಮಿಕ'ವಲ್ಲದ ಜಾತಿ-ರಾಜಕಾರಣವಾಗಿರುತ್ತದೆ. ಬೀದರಿನಲ್ಲಿರುವ ಪ್ರೇಮಾಸಿರ್ಸೆ ಕೋಮು 'ಯಾತ್ರೆ'ಗಳನ್ನು ಕಂಡವರು ಬೇರೆ. ಹೀಗೆ ಅವರಲ್ಲಿ ಮತೀಯತೆಯನ್ನು ತಿರಸ್ಕರಿಸುವ ವೈಚಾರಿಕ ತುಡಿತವೊಂದು ತುಂಬ ಕೆಲಸಮಾಡಿದೆ: ವೈಚಾರಿಕತೆಯು ಹುಟ್ಟು ಪ್ರಶ್ನಿಸುವ ಪ್ರವೃತ್ತಿಯಲ್ಲಿದೆ. ಪ್ರೇಮಾ ಕೆಲವೊಮ್ಮೆ ಅರ್ಥಪೂರ್ಣ ಪ್ರಶ್ನೆಗಳನ್ನು ಕೇಳಬಲ್ಲವರಾಗಿದ್ದಾರೆ. ಉದಾ: ಒಬ್ಬ ಗಂಡಸಿನ ಕೋಪದಿಂದ ಕಲ್ಲಾದ ಅಹಲ್ಯೆ ವಿಮೋಚನೆಗಾಗಿ ಮತ್ತೊಬ್ಬ ಗಂಡಸಿನ ಸ್ಪರ್ಶಕ್ಕೆ ಯಾಕೆ ನವೆದಳು? 'ಪ್ರಭು' ಸಂಸ್ಕೃತಿಯನ್ನು ಇಂಥ ಸ್ಪಷ್ಟ ಪ್ರಶ್ನೆಗಳೂ ಗೊಂದಲಕ್ಕೀಡುಮಾಡಬಲ್ಲವು. ತಮಿಳಿನಲ್ಲಿ ಆಳುವ ಸಂಸ್ಕೃತಿಗೆ ವಿರುದ್ಧವಾದ ಇಂಥ ಪ್ರತಿಸಂಸ್ಕೃತಿ ನಿರ್ಮಾಣ ಚೆನ್ನಾಗಿ ನಡೆದಿದೆ. ಪುದುಮೈಪಿತನ್ ಎಂಬ ಕತೆಗಾರನ ಕತೆಯಲ್ಲಿ ('ಸಾಬವಿಮೋಸನಂ') ಅಹಲ್ಯೆ ರಾಮನ ಸ್ಪರ್ಶವನ್ನು ತಿರಸ್ಕರಿಸಿ ಮತ್ತೆ ಕಲ್ಲೇ ಆಗಿ ಉಳಿಯುತ್ತಾಳೆ. ಈ ಕೆಲವು ಕವಿತೆ ಬಿಟ್ಟರೆ ಒಟ್ಟಾರೆ ಪ್ರೇಮಾಸಿರ್ಸೆಯವರ ಕಾವ್ಯಕರ್ಮವು ಒಬ್ಬ ಹೆಣ್ಣಿನ ಮನಸ್ಸಿನದು ಎಂದು ಗುರುತಿಸಬಹುದಾದ ಯಾವ ಛಾಪನ್ನೂ ಪಡೆದಿಲ್ಲ. ಇದೊಂದು ಕೊರತೆಯೂ, ಗುಣವೂ ಹೌದು. ಹೆಣ್ಣು ನಮ್ಮ ಪರಿಸರದಲ್ಲಿ ಎಲ್ಲರಂತೆ ಚಿಂತನೆ ನಡೆಸಬಲ್ಲ ಗಳಿಗೆಯ ಸ್ವರೂಪವಿದು ಎಂದು ನಾನು ತಿಳಿಯುತ್ತೇನೆ. ಸಾಮಾನ್ಯವಾಗಿ ಫೆಮಿನಿಸ್ಟ್ ಬರೆಹಗಾರರಲ್ಲಿ ಕಾಣುವ ಹೆಣ್ಣಿನ ಸ್ವಾತಂತ್ರ್ಯದ ಬಗೆಗಿನ ಗೀಳಿನಂಥ ಆಕ್ರೋಶ ಇವರಲ್ಲಿಲ್ಲ. ಆದರೆ ಕಾವ್ಯ 'ಗಟ್ಟಿ ಮೊಸರಂತೆ' ಹೇಗೆ ರೂಪತಾಳುತ್ತದೆಂದು ಕವಿತೆ

ಬರೆದಿರುವ ಪ್ರೇಮಾಶಿರ್ಷ ತಾವು ಮಾತ್ರ ಇಲ್ಲಿ ಮಜ್ಜಿಗೆಯಂಥದ್ದನ್ನು ಯಾಕೆ
ಉಣಬಡಿಸಿದ್ದಾರೆಯೋ ತಿಳಿಯದು.

*

## ಸೋಗಿನ ಚಂದ್ರ: ಆಶಾ ಕಡಪಟ್ಟಿ

(ಪ್ಯಾಂಥರ್ ಪ್ರಕಾಶನ, ಹುಬ್ಬಳ್ಳಿ ೧೯೯೦)

ಆಶಾ ಅವರು 'ಮನೆಗೆಲಸದ ನಂತರ ಉಳಿದ ಸಮಯದಲ್ಲಿ ಬರೆದ ' ಕವಿತೆಗಳಿವು
ಎಂದು ಹೇಳಿಕೊಂಡಿದ್ದಾರೆ. ಕವಿಗಳು ತಮ್ಮ ಕಾವ್ಯರಚನೆಯ ಹಿನ್ನೆಲೆ ಬಗ್ಗೆ ಕೊಡುವ
ಸೂಚನೆಗಳು ಮುಖ್ಯವಾಗಬೇಕಿಲ್ಲ. ಆದರ ಇಲ್ಲಿ ಈ ಸೂಚನೆಗೆ ತಕ್ಕ ಸಮರ್ಥನೆ
ಯನ್ನು ಅವರ ಕವಿತೆಗಳೇ ಒದಗಿಸಿವೆ. ಸಂಸಾರ ಬದುಕಿನಲ್ಲಿ ಹೆಚ್ಚಾಗಿ ಸಂತೋಷ
ವನ್ನೇ ಸವಿದಿರುವ ಹೆಣ್ಣೊಬ್ಬಳ ಸುಖ ಮಧುರಾನುಭವಗಳೇ ಇಲ್ಲಿನ ಮುಖ್ಯ
ಸ್ವರವಾಗಿವೆ. ಇಲ್ಲಿನ ಹೆಣ್ಣು ಮನಸ್ಸಿಗೆ ಗೊಂದಲಗಳಿಲ್ಲ. ಸಂಘರ್ಷಗಳಿಲ್ಲ.
ಯಾಕೆಂದರೆ ಆಕೆ 'ಅವರ ನೆರಳಲಿ ನನ ಬಾಳು' ಎಂದು ಮೂಲಭೂತವಾಗಿ ಒಪ್ಪಿ
ಕೊಂಡುಬಿಟ್ಟಿರುವುದು. 'ಇದೇನೂ ಶರಣಾಗತಿ' ? ಎಂದು ಆಶಾರ ಸಹಲೇಖಕಿ
ಯರು (ಸ್ತ್ರೀವಾದಿಗಳು) ಬೆಚ್ಚಬಹುದು. ನನಗೆ ಇದೊಂದು ಮುಗ್ಧತೆಯೆನಿಸುತ್ತದೆ.
ಇಂಥ ಮುಗ್ಧತೆ ಯಾಕೆ ಬಂದಿತು ಎಂಬುದು ಮುಖ್ಯವೆನಿಸುತ್ತದೆ. ಒಂದು ಪದ್ಯ
ದಲ್ಲಿಯಂತೂ ನಿರೂಪಕಿಯು ತನ್ನನ್ನು ನಿರ್ಲಕ್ಷ ಮಾಡುವ ಗಂಡನಿಗೆ 'ಬ್ಯಾಡಾದ್ರ
ಬಾವಿ ನುಗಸ್ರಿ / ಹೆಣ್ಣು ಜನುಮಕ ಮುಕ್ತಿ ನೀಡ್ರಿ' ಎಂದು ಗೋಗರೆಯುತ್ತಾಳೆ.
ಈ ಹೊತ್ತಿನ ಕಾವ್ಯದಲ್ಲಿ ಈ ನಿಲುವು ವಿಚಿತ್ರವೆನಿಸಬಹುದು. ಆದರೆ ಆಶಾ
ಕುಟುಂಬದ ಪುಟ್ಟ ಜಗತ್ತಿನ ಒಬ್ಬ ಸಂತೃಪ್ತ ಗೃಹಿಣಿಯಂತೆ, (ಎಲ್ಲೋ ಒಮ್ಮೆ
ಮಾತ್ರ ಬೇಸರಗೊಂಡಂತೆ) ಬರೆದಿದ್ದಾರೆ. ಇಲ್ಲಿ ಕವಿತೆಯೆಂದರೆ ಸುಂದರವಾದ
ಭಾವನೆಗಳನ್ನು ಹೇಳುವುದು ಎಂಬ ಗ್ರಹಿಕೆಯಿದ್ದಂತಿದೆ, ಇದಕ್ಕಾಗಿ ಇಡೀ ಕವನ
ಸಂಗ್ರಹವೇ ಉತ್ಸಾಹದಿಂದ ಮತ್ತು ದಾಂಪತ್ಯ ಗೀತೆಗಳಿಂದ ತುಂಬಿದೆ. ಇದು
ಆಶಾರ ಮೊದಲ ಸಂಕಲನವಾದ್ದರಿಂದ ಈ ನಿಲುವು ಸಹಜವಿದ್ದೀತು. ಆದರೆ
ಮುಂದೆ ತಾತ್ವಿಕವಾದ ಯಾವ ಆಯಾಮ ಇವರ ಕವಿತೆ ಪಡೆಯುತ್ತದೆ ? ಇದನ್ನು
ನಿರ್ಧರಿಸುವುದು ಬದುಕನ್ನು ನೋಡುವ ಕವಿಯ ದೃಷ್ಟಿಯಲ್ಲಿನ ಬೆಳವಣಿಗೆ.
ಕುಟುಂಬದ ಹೊರಗಿನ ಬದುಕಿಗೆ ತೆರೆದುಕೊಳ್ಳದಿರುವುದರಿಂದಲೇ ಈ ಮುಗ್ಧತೆ
ಸಂಭವಿಸಿದೆ. ಪುರುಷಪ್ರೇಮದಿಂದ ಉನ್ಮತ್ತವಾದ ಅಥವಾ ಪುರುಷ ದ್ವೇಷದಿಂದ
ವ್ಯಗ್ರಗೊಂಡ ಮನಸ್ಸುಗಳ ಮಾದರಿಗಳೆರಡೂ ಕನ್ನಡದಲ್ಲಿ ಬರುತ್ತಿದ್ದು, ಅವುಗಳ
ಪರಿಭಾಷೆ ನಮಗೆ ಪರಿಚಿತವಾಗಿ ಹೋಗಿದೆ. ಈ ಎರಡೂ ಕಡೆ ಅಸ್ವಸ್ಥತೆ-ತಾಕ
ಲಾಟಗಳಿಲ್ಲ. ಆದರೆ ಪುರುಷನನ್ನು ಪ್ರೀತಿಸುತ್ತಲೇ ವಿಮರ್ಶಿಸುವ, ವಿವೇಕ

ತುಂಬುವ ಒಲವಲ್ಲಿ ಪರಸ್ಪರ ಕರಗುತ್ತಲೇ ನಿಷ್ಠುರವಾದ ಎಚ್ಚರವಿರುವ ಹೊಯ್ದಾಟದ ಮನಸ್ಸು ಸೃಷ್ಟಿಸುವ ಕವಿತೆಯಲ್ಲಿ ವಿಷಾದ, ವಿಚಾರದ ಆಳಗಳು ದಕ್ಕುತ್ತವೆ. ಪ್ರತಿಭಾ ನಂದಕುಮಾರ ಸ ಉಷಾ ಇಂಥ ಕಾವ್ಯ ಬರೆಯುತ್ತಿದ್ದಾರೆನಿಸುತ್ತದೆ.

ಆಶಾರಲ್ಲಿ ನನಗೆ ಮೆಚ್ಚಿಕೆಯಾದ ಕವಿತೆ 'ಜೀವನ' ಎಂಬುದು. ಯಾಕೆಂದರೆ ಅಲ್ಲಿ ವೈಚಾರಿಕ ತಿಳಿವಳಿಕೆಯಿದೆ. ಬರೀ ಮುಗ್ಧತೆಯಿಲ್ಲ, ಜನಪದ ತ್ರಿಪದಿಗಳ ಪ್ರಭಾವಗಳೂ ಇವರ ಮೇಲಾಗಿವೆ. ಹೀಗಾಗಿ ಇಲ್ಲಿನ ಭಾಷೆಗೂ ಇಲ್ಲಿನ ಧೋರಣೆಗೂ ಒಳ್ಳೆ ಸಾಮರಸ್ಯವಾಗಿದೆ ಆದರೆ ಜಾನಪದ ಗರತಿಯ ನಿಲುವೇ ಆಶಾರಲ್ಲಿರುವುದು ಮಾತ್ರ ಈ ಹೊತ್ತಿನಲ್ಲಿ ಅಸಂಗತವಾಗಿವೆ ಯಾಕೆಂದರೆ ಹೆಣ್ಣು ಸ್ವಗತ ಮಾಡಿಕೊಂಡರೂ ಅದು ಸಮೂಹದ ಪ್ರಾತಿನಿಧಿಕತೆ ಪಡೆಯುವ ಸಂದರ್ಭವಿದಾಗಿರುವುದು.

*

## ಪಡೆಯು ಬಲ್ಲವರಿಗೆ : ಸುವರ್ಣ ಚಂದ್ರಶೇಖರ

(ಕರ್ನಾಟಕ ಸಂಘ ಪುತ್ತೂರು ೧೯೯೦)

ಸಾಮಾನ್ಯವಾಗಿ ಈಗಿನ ಕವಿತೆ ಬರೆಯುವ ಲೇಖಕಿಯರಲ್ಲಿ ನಮ್ಮ ವಾಸ್ತವವನ್ನು ವಿಮರ್ಶಿಸುವ ಮತ್ತು ಅದನ್ನು ಪ್ರತಿಪಕ್ಷವಾಗಿಸಿ ಎದುರಿಸುವ ಛಲ ಕಾಣುವುದಾದರೆ, ಯಾಕೋ ಏನೋ ಸುವರ್ಣ ಅವರಲ್ಲಿ ಹತಾಶೆಯ ಬೇಸರವಿದೆ. ಹೋರಾಡಲಾಗದೆ ಸೋತು ಕೈಚೆಲ್ಲಿದ ವಿಷಣ್ಣದಂತಿದೆ. ಈ ಕಾರಣಕ್ಕೆ ಇದು ವೈಯಕ್ತಿಕ ನೆಲೆಯಲ್ಲೇ ಉಳಿಯ ಬಯಸುವ ಕಾವ್ಯವಾಗಿದೆ. ಈ ವಿಷಣ್ಣತೆಗೆ ಕಾರಣವೇನೆಂದು ಸ್ಪಷ್ಟವಾಗುವುದಿಲ್ಲ. ಆದರೆ ದುರ್ದಮನೀಯವಾದ ಮುಪ್ಪು ಮತ್ತು ಸಾವಿನ ಚಿಂತೆ ಆಕೆಯನ್ನು ಆಮರಿಕೊಂಡಿರುವುದು ಸ್ಪಷ್ಟವಾಗಿದೆ. ಮೃತ್ಯು ಈ ಕವಿಯನ್ನು ಇನ್ನಿಲ್ಲದಂತೆ ಕಾಡಿಸಿದೆ. ಮೃತ್ಯುವಿನ ಭೀತಿ ಕಾವ್ಯವಸ್ತುವಾಗಬಾರದು ಎಂದಲ್ಲ: ಆದರೆ ನಮಗೂ ಅದು ತಟ್ಟುವ 'ರೂಪ'ವನ್ನೂ ಪಡೆದುಕೊಂಡಿಯೋ ಎಂದರೆ ಅದೂ ಇಲ್ಲ. ಇದಕ್ಕಾಗಿಯೂ ಇದು ವ್ಯಕ್ತಿಗತದಲ್ಲೇ ನಿಲ್ಲುವ ಕಾವ್ಯ. 'ಇಪ್ಪತ್ತೈದರ ಹರೆಯದಲ್ಲಿ ಎಪ್ಪತ್ತೈದರ' ಭಾವಗಳೇಕೆ ಈ ಕವಿಗೆ ಕಾಡಿದೆ ಎಂದು ಮುನ್ನುಡಿಕಾರರೂ ವಿಸ್ಮಯಗೊಂಡಿದ್ದಾರೆ. ತನ್ನನ್ನು 'ಬದುಕನೆದುರಿಸಿ ಬಾಳಲಾಗದ ಹೇಡಿ' ಎಂದು ಆಕೆಯೇ ಕರೆದುಕೊಂಡಿದ್ದಾರೆ; ಅಪವಾದವಾಗಿ 'ಬದುಕಬೇಕು' ಎಂಬ ಕವಿತೆಯಲ್ಲಿ ಒಳ್ಳೇ ಆದರ್ಶ, ಹೋರಾಟ ಗುಣವಿದೆ. ಆದರೆ ಸಮಗ್ರವಾಗಿ ಆವರಿಸಿಕೊಳ್ಳುವುದು ಅಸಹಾಯಕತೆಯೇ. "ಮಿಥ್ಯ ಅರ್ಥಹೀನ ಬಾಳುವೆಯ । ತಳ್ಳಿದೂರಕೆ। ಈ ಜಗದ ಕಣ್ಣಿಂದ ಮರೆಯಾಗಿ। ಅನಂತತೆಯ ಶೂನ್ಯದಲ್ಲಿ ಲೀನವಾಗುವಾಸೆ" ಎಂದು ಬರೆಯುವ ಸುವರ್ಣರ ಕವಿತೆಯ ಭಾವ ಬಹಳ ಜನರಿಗೆ ಮುಟ್ಟದಿರುವುದೇ ಒಳ್ಳೆಯದು; ಪುಸ್ತಕವೇನೋ ಸುಂದರವಾಗಿದೆ. (ಮಕ್ಕಳ ಪುಸ್ತಕದಲ್ಲಿರುವಂತೆ ಚಿತ್ರಗಳೂ ಇವೆ.)

ಆದರೆ ಕವಿಯ ನಿಲುವು ಮಾತ್ರ ಈ ಹೊತ್ತಿನಲ್ಲಿ ವಿಚಿತ್ರವಾಗಿದೆ. 'ಆಗಮನ' ಕವಿತೆಯ ಕಲ್ಪನಾಶಕ್ತಿ, 'ಸನ್ಮಾನಿತೆ' ಕವಿತೆಯ ವ್ಯಂಗ್ಯಗಳು ಇದರಲ್ಲಿ ಮುಳುಗಿ ಹೋಗಿ ಬಿಡುತ್ತದೆ. ಮುನ್ನುಡಿ ಬರೆದಿರುವ-ನಮ್ಮ ಜನಪ್ರಿಯ ಲೇಖಕಿಯರಲ್ಲಿ ತುಸು ಗಂಭೀರವಾಗಿ ಗಣಿಸಬಹುದಾದ ಎಂ. ಕೆ. ಇಂದಿರಾ ಅವರು ಕನ್ನಡ ಕಾವ್ಯದ ಬಗ್ಗೆ ಹೇಳುತ್ತಾ "ನವ್ಯ ಭವ್ಯ ದಿವ್ಯ ಬಂಡಾಯ ದಲಿತ ಶೃಂಗಾರ ಇತ್ಯಾದಿ ಅನೇಕ ಬಗೆಯಿದೆ. ಅದರಲ್ಲಿ ಶೃಂಗಾರ ನವ್ಯ ಎರಡನ್ನು ನಾನು ಸುಮಾರಾಗಿ ಅರ್ಥಮಾಡಿಕೊಳ್ಳಬಲ್ಲೆ. ಬಾಕಿಯದು ನನಗೆ ತಿಳಿಯದು" ಎಂದಿದ್ದಾರೆ. ಇತರರಿಗೆ ಬರೆಯುವ ನಾವು ಮತ್ತೊಬ್ಬರು ಬರೆದುದನ್ನು ಓದಬೇಕಾಗಿಲ್ಲ ಎಂಬ ನಿಲುವೂ ಇಲ್ಲಿದ್ದಂತಿದ್ದು, ನಮ್ಮ ಜನಪ್ರಿಯ ಲೇಖಕಿಯರ ಅಧ್ಯಯನ ಶೀಲತೆ ಯಾವ ಮಟ್ಟದಲ್ಲಿದೆಯೆಂದು ತಿಳಿಯುತ್ತದೆ.

*

## ಮೋಡದಲ್ಲಿ ಒಂದು ಕಣ: ಮಿತ್ರಾ ದೇವನೂರ್

**(ಸಂಗಾತಿ ಪ್ರಕಾಶನ ಬೆಂಗಳೂರು ೧೯೯೦ )**

ಕೆರೆಯಲ್ಲಿ ಬೆಳೆಯುವ ಕಮಲಕ್ಕಿದೆ ಆಶ್ಚರ್ಯ
ಗುಡುಗು ಸಿಡಿಲುಗಳಲ್ಲಿರುವ ಬೆಂಕಿಯೇ ಆಶ್ಚರ್ಯ
ನಕ್ಷತ್ರಗಳಿಂದ ಹೊಮ್ಮಿ ಬರುವ ಬಿಳಿ ಬೆಳಕೇ ಆಶ್ಚರ್ಯ

ಇದೆಲ್ಲ ನಮಗೆ ಗೊತ್ತಿರುವ ಸಂಗತಿಗಳೇ. ಆದರೆ ಬೆಳೆಯುತ್ತಾ ವಿಸ್ಮಯಪಡುವ ಗುಣವನ್ನೇ ಕಳೆದುಕೊಂಡ ಮನಸ್ಸಿಗೆ ಈ ಮುಗ್ಧ ಮಾತುಗಳಲ್ಲಿರುವ ಅಚ್ಚರಿಯು ಗೊತ್ತಿದ್ದನ್ನೇ ಮತ್ತೊಮ್ಮೆ ಹೊಸದಾಗಿ 'ಕಾಣಿ'ಸುತ್ತಿರುವಂತೆ ಸಹಜವಾಗಿದೆ, ಸರಳವಾಗಿದೆ. ಮಿತ್ರಾಳ ಕವಿತೆಗಳ ಭಾವವೇ ವಿಸ್ಮಯವಾಗಿದೆ. ನಿಸರ್ಗದ ವ್ಯಾಪಾರಗಳನ್ನು ಎಳೆಯ ಮನಸ್ಸೊಂದು ಕಂಡು, ತನಗಾದ ಸಂತೋಷ-ಸಂಭ್ರಮ-ಸಂಶಯಗಳನ್ನು ಈ ಚಿಗುರಿನಂಥ ಭಾಷೆಯಲ್ಲಿ ಹೇಳುತ್ತಿದೆ. ಇಲ್ಲಿನ ಭಾವಕ್ಕೆ ಬುದ್ಧಿಯ ಜತೆಗಾರಿಕೆಯಿಲ್ಲ, ಹೀಗಾಗಿ 'ಹೂವರಳಿದರೂ ಅರಳದ' ಮನ 'ನವಿಲು ಗರಿ ಕೆದರಲು' ಯಾಕೆ ಅತಳಿತು ಎಂದು ತರ್ಕ ಹುಡುಕುವಂತಿಲ್ಲ. ಪ್ರಕೃತಿ ಮತ್ತು ಪ್ರಕೃತಿಯಷ್ಟೇ ಸಹಜವಾದ ಮನಸ್ಸು ನಡೆಸಿರುವ ತೊದಲು ಸಂವಾದದಂತಿರುವ ಈ ಕವಿತೆಯ ಚೂರುಗಳು ನಿರಾಳ ಮನಃಸ್ಥಿತಿಯ ವಿಹಾರದಂತಿವೆ. 'ಮನಸ್ಸು' ಎಂಬ ಮಾತು ಇಲ್ಲಿ ಬಹಳ ಬರುತ್ತದೆ! ಮಿತ್ರಾ ತನ್ನ ಮನಸ್ಥಿತಿಯನ್ನೇ ಹೆಚ್ಚಾಗಿ ವರ್ಣಿಸಲೆತ್ನಿಸಿದ್ದಾಳೆ.

ಆಕಾಶದಂತಿದೆ ನನ್ನ ಮನ: ಭೂಮಿಯಂತಿಲ್ಲ ನನ್ನ ಮನ.

ಈ ಮಾತಿಗೆ ಮಾತ್ರ ಸಮರ್ಥನೆಯಿದೆ. ಯಾಕೆಂದರೆ ಮಿತ್ರಾ ಯಾವತ್ತೂ ತಾರೆ, ಆಗಸ, ಮೋಡ, ಚಂದ್ರ, ಬೆಳ್ದಿಂಗಳು, ಹಕ್ಕಿಯನ್ನೇ (ಆಕಾಶ ಮುಖಿ ವಸ್ತುಗಳನ್ನೆ)

ಕುರಿತು ಹೆಚ್ಚಾಗಿ ಹಾಡಿದ್ದಾಳೆ. ಇಲ್ಲಿನ ಕವಿತೆಗಳ ಕಲ್ಪನಾಶಕ್ತಿ ನಿಜಕ್ಕೂ ಬೆಳೆಯಬಲ್ಲದಾಗಿವೆ: 'ನಕ್ಷತ್ರ ಓ ನಕ್ಷತ್ರ ಯಾಕೆ ದಿನಾಲು ನೀನು ನನ್ನನ್ನು ನೋಡುವೆ' ಎಂಬ ಪ್ರಶ್ನೆಯು ಹಸುಳೆತನದಿಂದ

"ಕೊನೆಯಿರದ ಆಕಾಶದಂತಿರುವ ಈ ಮನಕ್ಕೆ ಕೊನೆ ಎಲ್ಲಿ ?
ಕೊನೆಯಿರದ ಮನದಂತಿರುವ ಈ ಆಕಾಶಕ್ಕೆ ಕೊನೆಯೆಲ್ಲಿ?" ಎಂಬ ಉದ್ಗಾರಗಳ ತನಕ ಆಕೆಯಲ್ಲಿ 'ಬೆಳವಣಿಗೆ'ಯನ್ನು ಕಾಣಬಹುದು. ಬೆಳೆದ ಕವಿಗಳು ಬರೆದ ಮಕ್ಕಳ ಪದ್ಯಗಳಿಗಿಂತ ಈ ಕವಿತೆಗಳು ಭಿನ್ನವಾಗಿರುವುದು ಇಲ್ಲಿನ ಮುಗ್ಧತೆಯಲ್ಲಿಯೇ. ಮುನ್ನುಡಿ ಬರೆದಿರುವ ಪುತಿನ ಇಲ್ಲಿನ ಈ ಮುಗ್ಧತೆಯನ್ನು, ಕಲ್ಪನೆಯನ್ನು ಚಪ್ಪರಿಸುತ್ತಾ ತಾವೂ ಮಗುವಾಗಿ ಬಿಟ್ಟಿದ್ದಾರೆ. ಮಿತಾಳಿಗೆ ತನ್ನ ಕಲ್ಪನೆಯನ್ನು ಹೀಗೆ ಅಭಿವ್ಯಕ್ತಿ ಮಾಡುವ ಸೌಲಭ್ಯ ಸಿಕ್ಕಿದೆ. ಇಂಥ ವಾತಾವರಣವಿಲ್ಲದ ಎಷ್ಟು ಪ್ರತಿಭೆಗಳು ಮೌನವಾಗಿ ಈ ಸಮುದಾಯದಲ್ಲಿದೆಯೋ? ಅವೂ ಪತ್ತೆಯಾಗುವುದಾದರೆ ಮಕ್ಕಳೇ ಬರೆದ ಕಾವ್ಯದ ಒಂದು ಪುಟ್ಟ ಪರಂಪರೆಯಾದರೂ ಆರಂಭವಾಗುತ್ತದೆ–ಯಾರ ಹಂಗೂ ಇಲ್ಲದೆ.

■

## ಮೂವತ್ತೈದರ ಹೊಸ್ತಿಲು: ಕೆ. ಆರ್. ಸಂಧ್ಯಾರೆಡ್ಡಿ

**(ಪರಿಮಳ ಪ್ರಕಾಶನ, ಬೆಂಗಳೂರು. ೧೯೯೦)**

ಈಗ, ಲೇಖಕಿಯರು ಕಾವ್ಯದಲ್ಲಿ ತೊಡಗಿಕೊಂಡ ನಂತರ, ಕನ್ನಡ ಕಾವ್ಯಕ್ಕೆ ಹೊಸತೊಂದು ಪರಿಭಾಷೆ, ಸ್ಪಂದನೆ ಸೇರುತ್ತಿರುವುದಂತೂ ನಿಜ. ಕಾವ್ಯ ಮಾಧ್ಯಮವನ್ನು ಅನುಭವ ಶೋಧನೆಗೆ ಗಂಭೀರವಾಗಿ ಸ್ವೀಕರಿಸಿದವರು ಕೆಲವರಾದರೆ ಮತ್ತೆ ಕೆಲವರು ಹೀಗೇ ತಮ್ಮ ಸಂಚಾರಿ ಭಾವಗಳನ್ನು ದಾಖಲೆಗೊಳಿಸಲು ಆರಾಮವಾಗಿ ತೆಗೆದುಕೊಂಡಿದ್ದಾರೆ. ಈ ಸಂಕಲನದ ಕವಿ ಸಂಧ್ಯಾ ಬಹುಶಃ ಈ ನಡುವೆ ಎಲ್ಲೋ ಬರುತ್ತಾರೆನಿಸುತ್ತದೆ. 'ಅಜ್ಜ'ನಂಥ ಉತ್ತಮ ಕಾವ್ಯವನ್ನು ಕೊಡುವಂತೆಯೇ ಬರೀ ಜಾಣತನವುಳ್ಳ ಚಮತ್ಕಾರೀ ಹನಿಗವಿತೆಗಳನ್ನು ಬರೆದಿದ್ದಾರೆ. ಈ ಎರಡನೇ ಬಗೆಯ ಜಾಣ್ಮೆಯ ಕವಿತೆ ನಮ್ಮನ್ನು ಬಹಳ ಹೊತ್ತು ಹಿಡಿದಿಡಲು ಸಾಧ್ಯವಿಲ್ಲ. ಆದರೆ ನಮಗೆ ಮುಖ್ಯವೆನಿಸುವುದು-ಕಾವ್ಯದ ಹಂದರ ಸರಳವಾಗಿಡುವ ಕಡೆ ಕೂಡ ಇರುವ-ಹೆಣ್ಣಿನ ವಿಶಿಷ್ಟ ಸಂವೇದನೆಗಳು. ಉದಾ; 'ಈಗೀಗ ಹೀಗೆ'ಯಲ್ಲಿನ ವಿಷಾದಗಳು; 'ಮಾನ ಸೆಳೆವ ಹುಡುಗನಿಗೆ' ಕವನದ ಅಥವಾ 'ಪ್ರೀತಿಯ ಕೊನೆ' ಎಂಬ ಕವನದ ಆಪ್ತ ಚಿತ್ರ, ಇದೇ ಅನುಭವದಲ್ಲಿ ಪಾಲ್ಗೊಂಡಿರುವ ಗಂಡಿಗೆ ಪ್ರಾಯಶಃ ವೇದನೆ ಮಿಡಿಯುವ ಈ ಚಿತ್ರ ಬರೆಯಲು ಸಾಧ್ಯವೇ ಎಂಬ ಶಂಕೆ ಬರುತ್ತದೆ. ಪ್ರೀತಿ ಕ್ಷೀಣಿಸುತ್ತಿರುವುದು ಇದೇ ಬದುಕಾಗಿಬಿಟ್ಟಿರುವ ಹೆಣ್ಣಿಗೆ ಹೃದಯದೊಳಗಿನ

ಸಂಕಟವಾದರೆ ಪ್ರಾಯಃ ಗಂಡು ವ್ಯವಹಾರಿಕವಾಗಿ ಎಂಬಂತೆ ಆಗಿದ್ದಾನೆ. ಇಂಥ ಅಪ್ಪ ಚಿತ್ರಗಳು ಇಲ್ಲಿ ಬೇಕಾದಷ್ಟಿವೆ. 'ಮನವೀಗ ದೀಪವಿಲ್ಲದ ಕೋಣೆ' 'ಮಹಾತ್ಮ ಗಾಂಧಿ ರಸ್ತೆಯಲ್ಲಿ ಮುದಿ ಎತ್ತಿನ ಬಂಡಿಯಂತೆ ಆಭಾಸ' 'ಶಾಂತ ಸಾಗರವೀಗ ಮುದ್ದುಗುಂಡಿನ ಮಡಿಲು'-ಹೀಗೆ ಎಷ್ಟೊ ರೂಪಕಗಳನ್ನು ಧ್ವನಿ ಪೂರ್ಣ ಸಾಲುಗಳನ್ನು ಸಂಧ್ಯಾ ಬರೆಯ ಬಲ್ಲರು. ಆದರೆ ಇದೇ ತೀವ್ರತೆ ಕವನ ತುಂಬ ಬೆಳೆಯುವುದು ಕಡಿಮೆ. ಕವಿ ನಡುವೆ ಎಲ್ಲೋ ಗದ್ಯತನಕ್ಕೆ ಇಳಿದುಬಿಡುವುದು ಗೊತ್ತಾಗುತ್ತದೆ. ಕಾಮೆಂಟ್ ಮಾಡುವ ಗುಣಕೂಡ ಸಂಧ್ಯಾ ಕವಿತೆಯ ಆಳವನ್ನು ಹೆಚ್ಚಿಸುವುದಿಲ್ಲ ವೆಂದು ಹೇಳಬೇಕಾಗಿದೆ. 'ನಮ್ಮ ಗಂಡಸರು,' 'ನನ್ನದಲ್ಲದ ಆದರ್ಶ' 'ನಾವು ಇರುವುದೇ ಹೀಗೆ' ಮೊದಲಾದ ಕಡೆ ಕೇವಲ ಟೀಕೆ ಮಾಡುವ ಪ್ರತಿಕ್ರಿಯಾತ್ಮಕತೆಯಿದೆ. ಸ್ಪಂದನ ಅಥವಾ ಧ್ವನಿಸುವಿಕೆಗೆ ಬದಲು ವೈಯುಕ್ತಿಕವಾಗಿ ಪ್ರತಿಕ್ರಿಯಿಸುವ ಕಡೆಯೆಲ್ಲಾ ಕವಿತೆ ಮೇಲ್ಪದರದಲ್ಲಿ ಕೆಲಸಮಾಡುತ್ತದೆ. ಈ ಪರಿಸರದಲ್ಲಿ ತಾನೂ ಒಬ್ಬಾಕೆಯಾಗಿದ್ದು ಈ ಬದುಕಿನ ಸ್ವಭಾವವೇಕೆ ಹೀಗಿದೆ ಎಂಬುದರ ಸಹ-ಸಂವೇದನೆ ಇಂಥ ಕಡೆ ಬೇಕೆನಿಸುತ್ತದೆ. ಆದರೆ ಸಂಧ್ಯಾ ವ್ಯಂಗ್ಯವನ್ನು ಪರಿಣಾಮಕಾರಿಯಾಗಿ ಬಳಸಬಲ್ಲರು. ಉದಾ: 'ಬೆಳಗು' ಪದ್ಯ. ಚನ್ನಯ್ಯ, ಬೇಂದ್ರೆ, ಆಲನಹಳ್ಳಿ ಇದೇ ತಲೆಬರೆಹದಲ್ಲಿ ಬರೆದಿದ್ದಾರೆ; ಸಂಧ್ಯಾ ಅವರಿಗೆ ಕೆ ಎಸ್‌ನ ಕವಿತೆಯು ಪ್ರೇರಣೆಯಿರಬಹುದಾದರೂ ಬೆಂಗಳೂರಲ್ಲಿ ಬೆಳಗನ್ನು ನೋಡಿರುವ ದೃಷ್ಟಿ ಸ್ವಂತದ್ದು ಮತ್ತು ಅದು ನಿಜವಾಗಿಯೂ ಸಮಾಜವಾದಿಯಾದುದು: ಹೆಣ್ಣೊಂದು ಹುಡುಗರನ್ನು ಕಂಡಾಗ ತನಗನಿಸುವುದನ್ನು ನಿರ್ಭಿಡೆಯಿಂದ ಪ್ರಾಮಾಣಿಕವಾಗಿ ಹೇಳಬಲ್ಲ ವಾತಾವರಣವನ್ನು ನಿರ್ಮಿಸುವುದು ಕೂಡ ಸಮಾಜವಾದಿ ಚಿಂತನೆಯ ಮತ್ತೊಂದು ಆಯಾಮವೆಂದೇ ನಾನು ಭಾವಿಸುತ್ತೇನೆ. ಯಾಕೆಂದರೆ ಗಂಡಸರು ಈ ಸೌಲಭ್ಯ ತಮಗೆ ಮಾತ್ರವಿರಬೇಕೆಂದು ಭಾವಿಸಿದಂತಿದೆ. ಸಂಧ್ಯಾ 'ತಮ್ಮ ಕಲ್ಪನೆಯ ಕುದುರೆಯು ಚಂದದ ಹುಡುಗರನ್ನು ಬಿಟ್ಟು ಬೇರೆಡೆಗೆ ಓಡುವುದೆ ಇಲ್ಲ'ವೆಂದು ಹೇಳುವುದು ನಮಗೆ ಈ ಕಾರಣಕ್ಕೆ ಮುಖ್ಯವಾಗಿದೆ. ಇದು ಬಹಳ ಸಣ್ಣ ಸಂಗತಿ ಇರಬಹುದು. ಆದರೆ ನಮ್ಮ ಸಾಂಸ್ಕೃತಿಕ ಪರಿಸರದಲ್ಲಿ ಸಣ್ಣ ಸಂಗತಿಯಲ್ಲ.

•

## ನೆರಳು: ಸ್ಮಿತಾ ಜಿ.

(ಪರಾಗ ಪ್ರಕಾಶನ, ರಾಯಚೂರು ೧೯೯೦)

ಗಂಭೀರ ಕಾವ್ಯಾಭ್ಯಾಸಿಗಳ ನಿರ್ಲಕ್ಷ್ಯ ಮತ್ತು ವಿಮರ್ಶಕರ ಗದರಿಕೆಗಳನ್ನು ಮೆಟ್ಟಿ ನಿಂತು ಕಾವ್ಯದ ಇತ್ತೀಚಿನ ಜನಪ್ರಿಯ ಪ್ರಕಾರವಾದ ಹನಿಗವಿತೆಯು ಮೊದ ಮೊದಲು ಸಂಕೋಚದಿಂದ ಮತ್ತು ಈಗೀಗ ನಾನೂ ಯಾಕೆ ಕವಿತೆಯಲ್ಲ ? ಎಂಬ

ದಿಟ್ಟಿಕೆಯಲ್ಲಿ ಪ್ರಕಟವಾಗುತ್ತಿದೆ. ಇದಕ್ಕೆ ಪತ್ರಿಕೆಗಳ ಬಹುಸಂಖ್ಯಾತ ಓದುಗರ ಒತ್ತಾಸೆಯೂ ಇದೆ. ಸಾಮಾನ್ಯವಾಗಿ ಕಾಮ ಪ್ರೇಮದ ವಸ್ತುವನ್ನು ಇಟ್ಟುಕೊಂಡು, ಪದಗಳೊಂದಿಗೆ ಆಟವಾಡುತ್ತ ಹಾಸ್ಯದ ಭಾವವನ್ನು ಸೂಸುವ ಈ ಕವಿತೆಯು ನಿಜಕ್ಕೂ ಜನಪ್ರಿಯವಾಗಿದೆ. ತೆಲುಗಿನಲ್ಲಿ ಈಗೀಗ ಇವುಗಳು ಉಚ್ಛ್ರಾಯ ಸ್ಥಿತಿಯನ್ನು ತಲುಪಿದೆಯೆಂದು ತಿಳಿದು ಬರುತ್ತದೆ. ಕನ್ನಡದಲ್ಲಿ ಇವುಗಳದ್ದೇ ಒಂದು ಸಣ್ಣ ಪರಂಪರೆಯೂ ಇದೆ. ಈ ಲಘುಕಾವ್ಯ ಪ್ರಕಾರವನ್ನು ಗಂಭೀರವಾದ ಆಲೋಚನೆಗೆ ಬಳಸಿದವರೂ (ಉದಾ. ತಿರ್ಕ) ಒಂದೇ ವಸ್ತುವನ್ನು ಆಧರಿಸಿ ಶತಕಲ್ಪನೆಗಳನ್ನು ಹೆಣೆದಿರುವವರೂ (ಉದಾ : ಸೂರ್ಯನನ್ನು ಕುರಿತು ಶಾ. ಬಾಲುರಾವ್) ಇದ್ದಾರೆ. ಆದರೆ ಸಾಮಾನ್ಯವಾಗಿ ಬಿ. ಆರ್. ಲಕ್ಷ್ಮಣರಾವ್ ಮೊದಲಾದವರು ಗಂಡು-ಹೆಣ್ಣಿನ ಸಂಬಂಧಗಳನ್ನು, ದುಂಡಿರಾಜ, ಚಂಪಾ-ಎಲ್ಲ ಬಗೆಯ ವಸ್ತುಗಳನ್ನು ನಮ್ಮ ಹಾಸ್ಯಕ್ಕಾಗಿ ಬಳಸುತ್ತಾರೆ. ಸ್ಮಿತಾ ಇದನ್ನು ಪ್ರೇಮ-ವಿರಹದಂಥ ಒಂದೇ ವಸ್ತುವಿನ ಅಭಿವ್ಯಕ್ತಿಗಾಗಿ ಬಳಸಿದ್ದರೂ ಅವರ ಯಶಸ್ಸು ತುಂಬ ಗಮನಾರ್ಹವಾಗಿದೆ. ಯಾಕೆಂದರೆ ಇವುಗಳಲ್ಲಿ ನಮ್ಮನ್ನು ಕಲಕಬಲ್ಲ ತೀವ್ರತೆಯಿದೆ. ಯಾವ ಶಬ್ದ ಚಮತ್ಕಾರಗಳೂ ಇಲ್ಲದೆ ಸರಳವಾಗಿ ಸಹಜವಾಗಿ ಅವರು ಹೇಳಿದ್ದಾರೆ. ಈ ಕವಿತೆಗಳನ್ನು ಎರಡು ಭಾಗದಲ್ಲಿ ನೋಡಬಹುದು: ಒಂದು ನಲ್ಲನೊಂದಿಗೆ, ಪ್ರೇಮದಲ್ಲಿ ಮೈಮರೆತ ಉತ್ಕಟ ಕ್ಷಣಗಳು; ಎರಡು ನಲ್ಲ ಅಗಲಿ ಹೋದಾಗಿನ ನೋವಿನ ಕ್ಷಣಗಳು. ತುಂಬ ಪ್ರಿಯವೆನಿಸುವುದು ಉತ್ಕಟತೆಯೂ ನೋವೂ ಸೇರಿ ಬರುವ ಸಂಕೀರ್ಣ ಗಳಿಗೆಗಳದ್ದು. ಅಂದರೆ ದ್ರೋಹಗೈದ ಅವನನ್ನೆಷ್ಟೇ ದೂರಿದರೂ ಪ್ರೀತಿಯ ನೆನಪುಗಳನ್ನು ದಮನ ಮಾಡಲಾಗದ ಸ್ಥಿತಿಯದು. 'ಕಾರಿರುಳಲಿ ಕರಗಿ ಹೋಗಬೇಕೆಂದೆ/ಅವನ ನೆನಪ ನಕ್ಷತ್ರಗಳು/ ಒಂದೊಂದಾಗಿ ಮಿನುಗಿದವು'. ಸ್ಮಿತಾ ಇವನ್ನು ರಚಿಸುವುದಕ್ಕೆ ಏನೇನೂ ರಿಸ್ಕ್ ತೆಗೆದುಕೊಳ್ಳುವುದಿಲ್ಲ. ಕಲ್ಪನೆಯ ಚಿತ್ರವನ್ನು ಸರಳವಾಗಿ ಹಾಗೇ ಮೂಡಿಸಿ ಸುಮ್ಮನಾಗುತ್ತಾರೆ. ಕಲ್ಪನಾ ಶಕ್ತಿಯ ಹೊಸತನವೇ ಇಲ್ಲಿನ ಆಕರ್ಷಣೆಯಾಗಿದೆ; ಭಾಷಾ ಬಳಕೆಯಲ್ಲಿ ಸ್ಮಿತಾ ಅಪ್ರಜ್ಞಾಪೂರ್ವಕವಾಗಿಯೇ ಇದ್ದರೂ ಈ ಕಲ್ಪನೆಯ ತುಣುಕುಗಳು ಇಷ್ಟವಾಗುತ್ತವೆ. ನಿಜವಾಗಿಯೂ ಸ್ಮಿತಾ ಒಳ್ಳೇ ಕವಿಯಾಗಿರುವುದರಿಂದ (ಅವರ ಮುನ್ನುಡಿಯೂ ಕಾವ್ಯದಂತಿದೆ) ಹನಿಗವಿತೆಗಳಿಗೇ ಅವರ ಶಕ್ತಿ ನಿಲ್ಲಬೇಕಿಲ್ಲ. ಹನಿ ನೀರು ನೆಕ್ಕಿಸಿಯೇ ನೀರಡಿಕೆ ತಣಿಸಲು ಹೊರಡುವ ಈ ಪ್ರಕಾರ ಬೊಗಸೆ ನೀರನ್ನರಸಲು ಪ್ರೇರಿಸುವುದಿಲ್ಲವೊ ಏನೋ ? ಅಂದರೆ ಗಂಭೀರವನ್ನು ಅರಿಯಲು ಇದು ಆಲಸ್ಯ ಅಥವಾ ಹಿಂಜರಿಕೆಯುಂಟು ಮಾಡಬಹುದು. ಆದರೆ ಗಂಭೀರ ಕಾವ್ಯ ನಿರ್ಮಿಸಿರುವ 'ಜಡತೆ'ಯ ವಾತಾವರಣದಿಂದ ಇದು ರಿಲೀಫ್ ಕೊಡುವುದು ಸುಳ್ಳೇನಲ್ಲ. ಸಮಸ್ಯೆಯೆಂದರೆ ಹನಿಗವಿತೆಗಳು ಕೊಡುವ ಅನುಭವದ ಸೌಂದರ್ಯ ನೆನಪಿನಲ್ಲಿ ಉಳಿಯುವುದಿಲ್ಲ-ಬಸ್ಸಿನಲ್ಲಿ ಹೋಗು

ವಾಗ ಕಂಡ ಚಿತ್ರದಂತೆ. ಸ್ವತಃ ಈ ಪ್ರಕಾರವೇ ಮಹತ್ವಾಕಾಂಕ್ಷಿಯಲ್ಲ. "ಬೇಕಾದರೆ/ನಕ್ಷತ್ರಗಳ ಎಣಿಸಿ ಹೇಳುವೆನು ನಲ್ಲ/ಸುಮ್ಮನೆ ಕಾಡಿ ಕೇಳದಿರು/ಮುತ್ತುಗಳ ಲೆಕ್ಕ" ಇಂಥ ಎಷ್ಟೋ ಮೆಲುಕು ಹಾಕುವ ಕಲ್ಪನೆಗಳನ್ನು ಸ್ಮಿತಾ ಕೊಟ್ಟಿದ್ದಾರೆ. ಸ್ಮಿತಾರನ್ನೋದುವಾಗ ಮಾಣಿಕ್ಯಾಯಕ್ಕ ಬಹಳ ಹಿಂದೆಯೇ ಇಂಥದನ್ನು ಬರೆದಿರುವುದು ನೆನಪಿಗೆ ಬರುತ್ತದೆ.

ರಹಮತ ತರೀಕೆರೆ

## ಆಸೆ : ಪ್ರಭು ಖಾನಾಪುರೆ

(ಸಮತಾ ಪ್ರಕಾಶನ, ಸರಸಂಬಾ, ಜಿ. ಗುಲಬರ್ಗಾ, ೧೯೯೦)

ಪ್ರಭು ಖಾನಾಪುರೆ ಅವರಿಗೆ ಕಾವ್ಯ ರಚನೆಯ ಹಿಂದೆ ಒಂದು ನಿರ್ದಿಷ್ಟ ಉದ್ದೇಶವಿದೆ. 'ನನ್ನುಡಿ'ಯಲ್ಲಿ ಅವರು ಹೀಗೆ ಹೇಳಿದ್ದಾರೆ– "ನೇರವಾದ ಅಭಿವಕ್ತಿ ಕಾವ್ಯವೆನಿಸಿಕೊಳ್ಳುವಲ್ಲಿ ಸೋತರೂ ಸಾಮಾಜಿಕ ಸಂಬಂಧ ಸಹಸಂಬಂಧಗಳ ಪರಿಣಾಮಗಳನ್ನು ಪರಿಚಯಿಸುವ ಕೆಲಸ ಮಾಡಬೇಕಾಗಿದೆ... ವ್ಯವಸ್ಥೆಯ ಧರ್ಮಸೂಕ್ಷ್ಮಕ್ಕೆ ಚುಚ್ಚಿ ನೋಡಬೇಕೆ ವಿನಹ ಕಲುಷಿತಗೊಂಡ ಸಾಂಸ್ಕೃತಿಕ ಬದುಕು ಆದರ್ಶೀಕರಿಸುವುದಂ ಬೇಡ, ಇಲ್ಲಿ ನನ್ನ ಹಸಿ ಅನುಭವಗಳನ್ನು ನನ್ನದೇ ಮಾತಿನಲ್ಲಿ ಓದುಗರ ಜತೆಗೆ ಹಂಚಿಕೊಂಡಿದ್ದೇನೆ",

ಹೀಗೆಂದ ಮಾತ್ರಕ್ಕೆ ಅವರು ಕಾವ್ಯ ಸಾಧ್ಯತೆಯನ್ನು ಯಾತಕ್ಕೆ ಅರಿಸಿಕೊಂಡರೆಂದು ಕೇಳುವುದು ತಪ್ಪಾಗುತ್ತದೆ ಖಾನಾಪುರೆ ಅವರಿಗೆ ತಮಗೆ ತೋಚಿದ ರೀತಿಯಲ್ಲಿ ಅಭಿವ್ಯಕ್ತಿಗೊಳಿಸುವ ಹಕ್ಕಿದೆ. ಆದರೆ ಆ ದಿಕ್ಕಿನಲ್ಲಿ ಇವರು ಇನ್ನಷ್ಟು ಆಲೋಚಿಸಿ ಕಾವ್ಯ ರಚನೆ ಮಾಡಿದರೆ, ಅವರ ಕಾವ್ಯ ಒಂದು ನಿರ್ದಿಷ್ಟ ಮಟ್ಟದ ಸಫಲತೆ ಪಡೆಯುವುದರಲ್ಲಿ ಸಂಶಯವಿಲ್ಲ.

ಸಮಾಜದ ಅತ್ಯಂತ ಕೆಳವರ್ಗದ ಹಾಗೂ ಶೋಷಿತ ವರ್ಗದ ದನಿಯಾಗಿ ಕೊಟ್ಟುಕೊಳ್ಳುವವರಲ್ಲಿ ಖಾನಾಪುರೆಯವರು ಯಶಸ್ವಿಯಾಗಿದ್ದಾರೆ. ಉದಾ–

ಹೊಟ್ಟೆ ತುಂಬ ಉಂಡು ತೃಪ್ತಿ ಹೊಂದಬಯಸುತ್ತೇನೆ
ಅನ್ನವಿಲ್ಲ ಗೆಡ್ಡೆಗೆಣಸು ತಿಂದು ಬದುಕುವ
ಅವಕಾಶ ನೀಡಬಲ್ಲಿರಾ ನೀವು ? (ಆಸೆ)

ಘೋರಾಂಧಕಾರದಲ್ಲಿ ಬದುಕಿ
ನಾವು ನುಂಗಿದ ದುಃಖವೆಲ್ಲ

ಪ್ರಭು ಖಾನಾಪುರೆಯವರು ತಮ್ಮ ಮುಂದಿನ ಕವಿತೆಗಳಲ್ಲಿ ಇನ್ನೂ ಹೆಚ್ಚಿನ ಯಶಸ್ಸನ್ನು ಸಾಧಿಸಲಿ. ಮುಕ್ತವಾದ ಅವರ ಚಿಂತನೆ, ವಿಶಾಲವಾದ ತಳಹದಿ, ತಿದ್ದಬೇಕೆನ್ನುವ ಹುರುಪು, ಎಲ್ಲರನ್ನೂ ಎಲ್ಲವನ್ನೂ ತನ್ನ ಜತೆಗೆ ಕೂಡಿಕೊಳ್ಳಬೇಕೆನ್ನುವ ವಿಚಾರ, ಹೃದಯ ವೈಶಾಲ್ಯ–ಇವುಗಳು ಇವರ ಕಾವ್ಯಮಾರ್ಗಕ್ಕೆ ದಾರಿದೀಪವಾಗಲಿ.

*

## ಕಪ್ಪು ಹುಡುಗನ ಬೆಳಗು: ಎಸ್. ನಟರಾಜ ಬೂದಾಳು

(ವಸುಮತಿ ಪ್ರಕಾಶನ, ಊರ್ಡಿಗೆರೆ-೫೭೨ ೧೪೦, ೧೯೯೦)

ಕೃಷಿ ನಮ್ಮ ದೇಶದ ಪ್ರಧಾನ ದುಡಿಮೆ. ಕೃಷಿಯ ಹೆಸರಿನಲ್ಲಿ ಬೇಕಾದಷ್ಟು ಅಭಿವೃದ್ಧಿಕಾರ್ಯ, ರಾಜಕೀಯ_ಎಲ್ಲವೂ ನಡೆಯುವ ದೇಶ ಇದು. ಆದರೂ ಕೃಷಿಕಾರನ ಬದುಕು ಭರಿಸಲು ಕಷ್ಟ ಎಂಬೆಲ್ಲ ಮಾತುಗಳೂ ಇವೆ. ಪ್ರಸ್ತುತ ಕವನ ಸಂಕಲನದಲ್ಲಿ ನಟರಾಜ ಅವರು ಕೃಷಿ ಕರ್ಮವನ್ನು ಕಾವ್ಯ ಪ್ರತಿಮೆ/ಪ್ರತೀಕಗಳಾಗಿ ಸೃಜನಾತ್ಮಕವಾಗಿ ಬಳಸಿಕೊಂಡಿರುವುದೇ ಇಲ್ಲಿನ ವೈಶಿಷ್ಟ್ಯ. ಈ ಕವಿಯ ತಲೆತುಂಬ ಕೃಷಿಯ ಆಚರಣೆ, ವಿಧಿಗಳು ಆಲೋಚನೆಯ ಭಾವಾಭಿನಯದ ಸೆಳಕುಗಳಾಗಿ ಮೂಡಿ ಬಂದಿವೆ.

ಆದರೆ ಮುಂಡೇಲಾನ ಬಿಡುಗಡೆಯ ಬೆಳಗನ್ನು ಆಚರಿಸುವ ಕವನ 'ಕಪ್ಪು ಹುಡುಗನ ಬೆಳಗು' ಬೇರೆ ಕವನಗಳಿಗೆ ಹೋಲಿಸಿದರೆ, ವಿಭಿನ್ನವಾಗಿದೆ.

ಬಾಯಿ ಕುಕ್ಕಿಯ ಬಿಗಿದ
ಬಿಳಿಹಾರುವರ ಬೇಟೆಗೆ
ಸಿಕ್ಕ ಹಕ್ಕಿಯ ರೆಕ್ಕೆ
ಪಟಪಟನೆ ಬಡಿದು
ಪುಟಿದೆದ್ದು ಸಿಡಿದು

ಈ ಸಾಲುಗಳು ಈ ಕವನದ ನಾಡಿ ಹಿಡಿಯುವುದಕ್ಕೆ ಸಹಾಯಕವಾಗಿವೆ. ಇದಕ್ಕೆ ಹೋಲಿಸಿದಾಗ, 'ಅಕ್ಕ'ನ ಬಗೆಗಿನ ಈ ಕೆಳಗಿನ ಸಾಲುಗಳು ಈ ಸಂಕಲನದ ಒಟ್ಟು ನುಡಿಗಟ್ಟಿಗೆ ಹತ್ತಿರವಾಗಿವೆ.

ಹಸಿಬೆಳತಿಗೆಯ ತಂದು ಗುಗ್ಗುರಿಯ ಕಾಸಿ
ತಾನುಟ್ಟಿದ್ದ ಕಳಚಿ ಮೂಡಲು
ಪಡುವಲಿಗೆ ಜೋಲಿ ಕಟ್ಟಿ
ಜಗವ ಮಲಗಿಸಿ ಅಕ್ಕ ಜೋ ಎಂದಳು.

ಸಂಕಲನದ ಪ್ರಮುಖ ಪ್ರತಿಮೆಯಾದ ಕೃಷಿಕಾರನ ಕಾರ್ಯವೈಖರಿಯನ್ನು 'ಬೆಳಗಾದ ಪರಿ', 'ಕಾಯುವ ಹುಡುಗಿ', 'ತವಕ', 'ಊರ್ಮಿಳೆಯ ಸ್ವಗತ', 'ಸೆಲೆ', 'ಎರಡು ಹನಿಗಳು', 'ಅವ್ವ', 'ಉಕ್ಕಿ ಸಾಲುಗಳು,' ಕವಿತೆಗಳಲ್ಲಿ ಕಾಣುತ್ತದೆ, ಈ ಕವಿತೆಗಳಲ್ಲಿ ಕಂಡು ಬರುವ ಫಲವತ್ತತೆ.

ಏಳು ಪಾದದ ಸೆಡ್ಡೆ
ಮುಂಗಾರು ಘಮಲು ಕುಡಿದ
ಮೊದಲುಕ್ಕಿ ಬಿಟ್ಟ ಹೊಲ
ಪಾದ ಪಾದಕೂ ಬೊಗಸೆ ಬಿತ್ತ
ತುಂಬಿ ಬಿತ್ತಿದ ಅಪ್ಪ ಅವ್ವನ
ಇಣುಕಿಣುಕಿ ನೋಡುವ ತವಕಕ್ಕೆ
ನೆಲದವ್ವ ಕಣ್ಣರೆಪ್ಪೆ ಬಿಡಿಸಿದಳು. (ತವಕ)

ಮಳೆಯ ಪ್ರಸನ್ನತೆ.

ಮಳೆಹನಿಯಾಗಿ ಬಂದರೆ
ಕರಗಿ ಒಂದಾಗುತ್ತಾಳೆ (ಕಾಯುವ ಹುಡುಗಿ)

ವ್ಯವಸಾಯದ ಕ್ರಿಯಾಶೀಲತೆ,

ಆರು ಕಟ್ಟಿ
ನೆಲಕೆ ನೆರಿಗೆ ಹಿಡಿದ
ಹುಡುಗ

ನಾಚಿ ಆಮೇಲೆ
ಸೀರೆ ಉಟ್ಟಳು
ಭೂಮಿ

ಇವುಗಳನ್ನು ಹೀಗೆ ಪ್ರಬುದ್ಧವಾದ ರೀತಿಯಲ್ಲಿ ಬಳಸಿರುವುದು ಕ್ರಿಯಾತ್ಮಕತೆಯನ್ನು ಬಿಂಬಿಸುತ್ತದೆ.

ಇದೇ ಇಲ್ಲಿನ ಮುಖ್ಯ ಕಾಳಜಿ ಆದರೂ, 'ಧ್ಯಾನ,' 'ಪುಣ್ಯವಂತೆ,' 'ತೊರೆಯಜ್ಜ,' 'ಅಗ್ನಿಕೊಂಡ' ದಂತಹ ಕವಿತೆಗಳು ಕವಿ ಜೀವನವನ್ನು ಪರಿಗ್ರಹಿಸುವ ಆರೋಗ್ಯಕರ ನಿಲುವನ್ನು ತೋರಿಸುತ್ತವೆ. 'ಅಗ್ನಿಕೊಂಡ' ಕವಿತೆಯ ಹ್ರಸ್ವತೆಯಲ್ಲಿ ಒಂದೊಂದು ವಿವರವೂ ಕುದಿಪಾಕಕ್ಕೆ ಬರುವ ರೀತಿ, ಕವಿತೆಯನ್ನು ಒಂದು ಇಡೀ ಸಮುದಾಯದ ನಂಬಿ ನಡವಳಿಕೆಗಳ ಪ್ರತಿಮೆಯ ಮಟ್ಟಕ್ಕೆ ಎತ್ತುತ್ತದೆ. ಹೆಣ್ಣು ಬಲಿಯಾಗುವ ರೌದ್ರಭೀಕರ (ಕಳ್ಳ ಬಸುರಿನ ಬೇನೆ, ಕರಗ-ಚರಗ, ಬೆಂದು ಹೋದ ತಾಯಿ,

ಮಡಿಲ ಕೆಂಡವಾದ ಕೂಸು) ಪ್ರಕರಣ, ಬದುಕಿನ ಅಸಹನೀಯ ಆದರೂ ಅನಿವಾರ್ಯ ನೋವು ಮತ್ತು ಹಂಗನ್ನು ಬಿಟ್ಟಿ ಇಳಿಸುತ್ತದೆ. ಇಂಥ ಸರ್ವಾಂಗ ಫಲಕಾರಿಯಾದ ಕವಿತೆ ಇಡೀ ಸಂಕಲನದ ಮೌಲ್ಯವನ್ನು ಹೆಚ್ಚಿಸುತ್ತದೆ.

ಕನ್ನಡ ಕಾವ್ಯ ಕ್ರಿಯಾಶೀಲತೆಯನ್ನು ಬೇರೆ ಬೇರೆ ಜೀವ ಸತ್ವಗಳ ಮೂಲಕ ಧಾರೆಯೆರೆದುಕೊಳ್ಳುತ್ತಿರುವ ಈ ಸಂಕ್ರಮಣಾವಸ್ಥೆಯಲ್ಲಿ, ಶುದ್ಧ ದೇಸೀಯ ಹಾಗೂ ಈ ನೆಲದ ಬದುಕಿಗೆ ಒಗ್ಗಿದ ಮೂಲಗಳಿಂದ ನಟರಾಜರು ತಮ್ಮ ಕಾವ್ಯವನ್ನು ಶ್ರೀಮಂತಗೊಳಿಸಿದ್ದಾರೆ. ಇಲ್ಲಿ ಪಟ್ಟಣದ ಜೀವನದ ಅಬ್ಬರವಿಲ್ಲ. ಶೋಷಣೆ, ಬಂಡಾಯಗಳು ಜೀವ ಸಂವೇದಿ ಲಕ್ಷಣವಾಗಿವೆಯೇ ಹೊರತು. ಹೊರಗಿನಿಂದ ತಂದ ಎರವಲು ಸರಕುಗಳಾಗಿಲ್ಲ. ನಮ್ಮ ಜನಪದರ ಜೀವನ ವ್ಯಾಪಾರವನ್ನು ಆಳವಾಗಿ ಹೊಕ್ಕಿರುವ ಐತಿಹ್ಯ, ಮಿಥ್‌ಗಳನ್ನು ಹಿಗ್ಗಾಮುಗ್ಗಾ ಎಳೆಯುವ ಪ್ರಯತ್ನವಿಲ್ಲ. (ಬಹುಶಃ ಮುಂದಿನ ಅವರ ಕವಿತೆಗಳಲ್ಲಿ ಅಂತಹ ಒಂದು ನಿಷ್ಠುರ ಪ್ರಯತ್ನ ನಡೆದರೆ ಆಶ್ಚರ್ಯವಿಲ್ಲ) ಈ ಕಾರಣಗಳಿಗಾಗಿಯೇ ತಮ್ಮ ಮಿತಿಯಲ್ಲೇ ಉಜ್ವಲವಾಗಿ ಬರೆಯುತ್ತಿರುವ (ಆದರೆ ಆ ಬಗ್ಗೆ ಯಾವ 'ಶೋ' ಇಲ್ಲಿ ಕಂಡು ಬರುವುದಿಲ್ಲ ಎನ್ನುವುದು ಮುಖ್ಯ) ನಟರಾಜ ಅವರು ಒಬ್ಬ ಗಂಭೀರ ಕವಿ, ಅವರ ಕಾವ್ಯ ಗಂಭೀರ ಕಾವ್ಯ. ಅವರು ಈ ಮೊದಲ ಸಂಕಲನದಲ್ಲೇ ಪಡೆದಿರುವ ತಕ್ಕ ಮಟ್ಟಿನ ಸಿದ್ಧಿಗೆ ಅಭಿನಂದನಾರ್ಹರು.

*

## ಜಷೆರನೇ ಇಲ್ಲ ದಿಲ್ಲಿಯಲ್ಲಿ : ದೇಶಪಾಂಡೆ ಸುಬ್ಬರಾಯ

(ನಿಸ್ಪೃಹ ಪ್ರಕಾಶನ, ಧಾರವಾಡ, ೧೯೮೦)

ಕಾವ್ಯವನ್ನು ಗಂಭೀರವಾಗಿ ತೆಗೆದುಕೊಂಡ ಕೆಲವರಲ್ಲಿ ದೇಶಪಾಂಡೆ ಸುಬ್ಬರಾಯರೂ ಒಬ್ಬರು. ಇದು ಅವರ ಐದನೇ ಕಾವ್ಯಕೃತಿ. ಈ ಪುಸ್ತಕದಲ್ಲಿ ಎರಡು ಭಾಗಗಳಿವೆ. ಮೊದಲನೆಯದರಲ್ಲಿ ದಿಲ್ಲಿಯನ್ನು ಕುರಿತ ಹತ್ತು ಲಹರಿಗಳಿವೆ. ಎರಡನೆಯದರಲ್ಲಿ ಕಾಲವನ್ನು ಕುರಿತ ಹದಿನಾಲ್ಕು ಎಳೆಗಳಿವೆ

ದಿಲ್ಲಿಯನ್ನು ಕುರಿತು ಗೋಕಾಕ ಮತ್ತು ಅಡಿಗರು ಬರೆದಿದ್ದಾರೆ. ಬಹುಶಃ ದೇಶದ ರಾಜಧಾನಿ ಎನ್ನುವುದು ಮತ್ತು ಅದರ ಭಾವ ಸಂವೇದಿ ಚರಿತ್ರೆ, ದೆಹಲಿ ನಮ್ಮ ಕವಿಗಳಿಗೆ . ಸ್ಫೂರ್ತಿದಾಯಕವಾಗಿರಬಹುದು. ಸುಬ್ಬರಾಯರು ತಾವು ದೆಹಲಿಯಲ್ಲಿ ಕಳೆದ ದಿನಗಳ ಹಿನ್ನೆಲೆಯಲ್ಲಿ ಹತ್ತು ಲಹರಿಗಳನ್ನು ಹರಿಯಬಿಟ್ಟಿದ್ದಾರೆ. ಮೊಟ್ಟ ಮೊದಲಿಗೆ ದಿಲ್ಲಿ ಅವರಿಗೆ ತನ್ನೆಲ್ಲ ಕರಾಳತೆಯನ್ನು ಬಿಚ್ಚುತ್ತದೆ—

ಹರಿಗಡಿದ ಗಟಾರಗಳ
ಹಂದಿಗಳ ಮುಜ್ಜನ

ಇವಳ ಪ್ರಸ್ತುತ ರತಿ ಕೂಟದ
ಥರ್ಮೆ ದರ್ಶನ.

ಅಂದ ಹಾಗೆ
ಇದಕ್ಕಿಂತ ಭಿನ್ನವಿಲ್ಲ;
ದೇಶಕ್ಕೊಂದು ಏಡ್ಸಿನ ಏಡಿಯಾಗಿ
ಕೊಲ್ಲಲೆಂದೇ ಕಚ್ಚಿ ಕೂತ
ದೆಹಲಿಯ ರಾಜಕಾರಣ.

ಮುಂದೆ ಇದು, "ಆಸೇತು ಹಿಮಾಚಲ ಒಂದೊಂದು ಬಡಾವಣೆಯೂ ದೆಹಲಿಯ ದಫ್ತರಿನಿಂದಾದ ಉಡಾವಣೆ" ಎನಿಸುತ್ತದೆ. ಈ ಎರಡು ಅತಿಗಳ ಮಧ್ಯೆ "ಕುರ್ಚಿಯನ್ನು ಕಾಲಿಗೆ ಕೆಡವ ಬಲ್ಲೆ-ಷೋಂಟ ಮಾತ್ರವಾದ ಸೋಗಿನ ಲಕ್ಷ್ಲೆ"ಯಾದ ದಿಲ್ಲಿ. ಈ ಎಲ್ಲ ಹಿನ್ನೆಲೆಯಲ್ಲಿ, ಸಾಮಾನ್ಯ ನಾಗರಿಕ ಹಾಗೂ ಗಾಂಧಿ ನೆಹರೂಗಳ ಚಿತ್ರ ಮೂಡುತ್ತದೆ. ಒಟ್ಟಿನಲ್ಲಿ, ದೆಹಲಿ ಕುರಿತ ಲಹರಿಗಳು ದೆಹಲಿಯ ಮಿಥ್ ಅನ್ನು ಅರ್ಥೈಸಲು ಹೋರಾಟ ನಡೆಸುತ್ತವೆ.

ಎರಡನೆಯ ಭಾಗದ ಕಾಲ ವನ್ನು ಕುರಿತ ಕವಿತೆಗಳು ಆ ವಸ್ತುವಿಗೆ ತಕ್ಕ ವಸ್ತು ಪ್ರತಿರೂಪವನ್ನು ಸೃಷ್ಟಿಸುವುವರಲ್ಲಿ ಯಶಸ್ವಿಯಾಗಿಲ್ಲ. ಕಾಲ ಒಂದು ಅಮೂರ್ತ ವಸ್ತುವಾದದ್ದರಿಂದ, ಅದಕ್ಕೆ ತಕ್ಕ ಪ್ರತಿರೂಪವಿಲ್ಲದೆಯೆ, ಅದನ್ನು ಚಿತ್ರಿಸುವುದು ಕಷ್ಟ ಸಾಧ್ಯ. ಕನ್ನಡದಲ್ಲಿ, ಯಶವಂತ ಚಿತ್ತಾಲ, ಚನ್ನವೀರ ಕಣವಿ, ಅರವಿಂದ ನಾಡಕರ್ಣಿ-ಇವರುಗಳು ಕಾಲವನ್ನು ಕುರಿತು ಬರೆಯುವಾಗ, ವಸ್ತು ಪ್ರತಿ ರೂಪವನ್ನು ಅವಲಂಬಿಸಿ ಬರೆದಿರುವುದನ್ನು ಇಲ್ಲಿ ನೆನೆಯಬಹುದು.

ಈಗ, ಸುಬ್ಬರಾಯರು, ಈ ವಸ್ತುವನ್ನು ಹೇಗೆ ನಿಭಾಯಿಸುತ್ತಾರೆ, ಎಂಬ ಅಂಶವನ್ನು ಗಮನಿಸಬಹುದು, ಇಲ್ಲಿ ಮುಖ್ಯವಾಗಿ ಬಳಸಿರುವುದು ಮುದಿಸೂಳೆ (ಎಳೆ:ಒಂದು), ಹರೆಯ (ಎಳೆ; ಐದು, ಐದು ಮತ್ತೊಂದು), ಆಕಾಶಕಾಯ (ಎಳೆ; ಆರು ಮತ್ತು ಎಂದು). ಕಸಿಯುವುದು (ಎಳೆ: ಒಂಬತ್ತು,) ಸಾವು (ಎಳೆ: ಹನ್ನೊಂದು), ರಾಗ ಭಾವಗಳು (ಎಳೆ:ಹನ್ನೆರಡು). ಈ ಪ್ರತಿಮೆಗಳು ಒಂದರಿಂದೊಂದು ಬೆಳೆಯದ ಕಾರಣ, ಇಲ್ಲಿ ಸಾವಯವ ಶಿಲ್ಪ ಕಂಡುಬರುವುದಿಲ್ಲ. ಅಲ್ಲದೆ ಯಾವೊಂದು ಪ್ರತಿಮೆಯೂ ಹೆಚ್ಚು ಪ್ರಭಾವಕಾರಿಯಶಾಗಿಲ್ಲ. ಮುದಿಸೂಳೆಯ ಪ್ರತಿಮೆ ದಿಲ್ಲಿಯ ಲಹರಿಯಲ್ಲಿಯೂ ಬರುತ್ತದೆ ಎಂಬ ಅಂಶ ಗಮನಿಸಬೇಕು. ಹರೆಯದ ಪ್ರತಿಮೆ ಪ್ರಭಾವಕಾರಿಯಾದದ್ದೆ, ಮನುಷ್ಯ, ಕಾಲವನ್ನು

ಕುರಿತು ಚಿಂತಿಸುವಾಗ, ತನ್ನನ್ನೇ ಆಳತೆಗೋಲಾಗಿ ಬಳಸುವುದು ಸಹಜ. ಇಲ್ಲಿನ ಎರಡು ಎಳೆಗಳಲ್ಲಿ ಇದು ಮೂಡಿ ಬಂದಿದೆ. ಆದರೆ, 'ನಿನ್ನೆಯು ಮರವಿಗೆ ಇನ್ನೊಂದು ಹೆಸರು,' ಎಂದು ವರ್ಣಿಸುತ್ತಲೇ, 'ಹರೆಯ ಒಂದು ಸಹಜದ ಭವ್ಯ ಸಂಭವ' ಎನ್ನುವಾಗ ವಿರೋಧಾಭಾಸ ಕಂಡುಬರುತ್ತದೆ. ಇದರಲ್ಲಿ ಎರಡನೆಯ ಹೇಳಿ ಕೆಸಮಂಜಸ. ಮೊದಲನೆಯದು ಪ್ರಶ್ನಾರ್ಹ.

ಇನ್ನು ಕಾಲವನ್ನು ಆಕಾಶಕಾಯ ವರ್ಣಿಸಿರುವುದು ಏನನ್ನು ಹೇಳುತ್ತದೆ ? ಕಾಲ ನಮಗೆ ದೈನಂದಿನ, ಅನುಕ್ಷಣದ ಅನುಭವವಾದ್ದರಿಂದ, ಕಾಲವನ್ನು ಧೂಮಕೇತುವಿಗೆ ಹೋಲಿಸಿದ್ದು ಅಪ್ಯಾಯಮಾನವೆನಿಸುವುದಿಲ್ಲ. ಕಾಲಗರ್ಭದಲ್ಲಿ ಅನಿರೀಕ್ಷಿತಗಳು ಇರುವುದು ಎಲ್ಲರ ಅನುಭವವೇ. ಆದರೆ ಅದೇ ಕಾರಣಕ್ಕೆ ಅದನ್ನು ಧೂಮಕೇತು ಎನ್ನಬಹುದೆ ? ಇನ್ನು ಕಾಲವನ್ನು ಸಾವೆಂದು ಕರೆದಿರುವುದು ಪ್ರಾಚೀನ ಕಾಲದಿಂದಲೂ ಗೊತ್ತಿರುವ ವಿಷಯವೇ. ಈ ಎಳೆಯ,

ಅಲ್ಲ ಸಾವು ಒಂದು ಅಂತಿಮ ಕಾವು;
ಸಾವು ಒಂದು ನಿರಂತರ ವಾಸ್ತವ
ಸ್ಥಾಯೀ ಚಲನೆ,

ಎಂಬ ಆರಂಭದ ಸಾಲುಗಳು ಲಗತ್ತಾಗಿವೆ. ಇಡೀ ಕವನದ ಪ್ರಭಾವಕಾರಿ ಸಾಲುಗಳಲ್ಲಿ ಇವು ಎದ್ದು ನಿಲ್ಲುತ್ತವೆ.

ಸರಳವಾದ ಭಾಷೆ, ನೇರ ಅಭಿವ್ಯಕ್ತಿ ಇವುಗಳಿಂದ ಸುಬ್ಬರಾಯರ 'ಜಫರನೇ ಇಲ್ಲ ದಿಲ್ಲಿಯಲ್ಲಿ' ಒಂದು ಅಪೂರ್ವ ಸಂಕಲನವಾಗಿದೆ. ಇಲ್ಲಿ ಕಂಡುಬರುವ ದೋಷಗಳು ದೊಡ್ಡ ಸಾಧನೆಯ ಮಾರ್ಗದಲ್ಲಿ ಕಂಡುಬರುವ ದೋಷಗಳಷ್ಟೇ. ಒಂದು ಕವನ ಲಹರಿ ಮತ್ತು ಹದಿಮೂರು 'ಎಳೆ'ಗಳ ಮೂಲಕ ಗಂಭೀರವಾದ ಕಾವ್ಯ ರಚನೆಗೆ ತೊಡಗಿರುವ ಸುಬ್ಬರಾಯರ ಕಾವ್ಯ ಕರ್ಮ ಅಧ್ಯಯನಶೀಲ ಕೃತಿಯಾಗಿದೆ. ಅವರಿಗೆ ಹೆಚ್ಚಿನ ಯಶಸ್ಸು ದೊರೆಯಲಿ ಎಂದು ಹಾರೈಸುತ್ತೇನೆ.

**ವೇಣುಗೋಪಾಲ ಸೊರಬ**

## ನೆಲ್ಸನ್ ಮಂಡೇಲಾ: ಮಹೇಂದ್ರ ಪ್ರಸಾದ

(ಪ್ರೀತಿ ಪ್ರಕಾಶನ, ಬೆಂಗಳೂರು; ೧೯೯೦)

ಕವಿ ಮಹೇಂದ್ರ ಪ್ರಸಾದರು ಈ 'ನೆಲ್ಸನ್ ಮಂಡೇಲಾ' ಕವನ ಸಂಗ್ರಹ ಸಂಕಲಿಸಿದ್ದಾರೆ. ಈ ಕವನಕ್ಕಾಗಿ ಪತ್ರಿಕಾ ಪ್ರಕಟನೆ ಕೊಟ್ಟಾಗ ಅದಕ್ಕೆ ಸ್ಪಂದಿಸಿದ ಹಿರಿ, ಕಿರಿಯ ಕವಿಗಳ ಕವನಗಳು ಇಲ್ಲಿವೆ. ಇದರಲ್ಲಿ ಮುಖ್ಯ ಕವಿಗಳಾದ ಚಂಪಾ ಅವರ ಕವನವೂ ಸೇರಿದೆ. ಒಟ್ಟು ಇಪ್ಪತ್ತೇಳು ಕವನಗಳಿವೆ. ಒಬ್ಬ ವ್ಯಕ್ತಿಯ ಬಗ್ಗೆ ಇಷ್ಟೊಂದು ಕವನಗಳು ಒಂದಾಗಿ ಬರುತ್ತಿರುವುದು ಕಡಿಮೆಯ ಸಂಗತಿಯೇನಲ್ಲ.

ಚಂಪಾರ ಕವನಗಳಲ್ಲಿ ಇರುವ ಕಾವ್ಯಾತ್ಮಕ ಅರ್ಥವಂತಿಕೆ ಉಳಿದ ಕವನಗಳಲ್ಲಿ ಇಲ್ಲದಿರಬಹುದು. ಆದರೆ ಜಗತ್ತಿನ ದಲಿತ ವರ್ಗದ ಹೋರಾಟಗಾರ ದಕ್ಷಿಣ ಆಫ್ರಿಕಾದ ಕಪ್ಪುಜನರ ನೇತಾರ ಮಂಡೇಲಾ ಬಗ್ಗೆ ನಮ್ಮ ಯುವ ಕವಿಗಳು ಸ್ಪಂದಿಸಿದ ಪ್ರತಿಕ್ರಿಯೆ ನಮಗೆ ಆಶಾದಾಯಕವಾಗಿದೆ. ಇಲ್ಲಿಯ ಕವನಗಳ ಹೆಚ್ಚು ಕಡಿಮೆಯ ಕಾವ್ಯ ವಿಮರ್ಶೆ ಮುಖ್ಯವಲ್ಲ ಎಂದು ಸಂಪಾದಕ ಶ್ರೀ ಮಹೇಂದ್ರ ಪ್ರಸಾದರು ಸರಿಯಾಗೇ ಹೇಳಿದ್ದಾರೆ.

ಆಫ್ರಿಕಾದ ಕಪ್ಪುಖಂಡದ ದಲಿತ ವಿಮೋಚನಾ ಹೋರಾಟಕ್ಕೂ ಇಂಡಿಯಾದ ವರ್ತಮಾನಕ್ಕೂ ಎಂಥ ಗಾಢ ಸಂಬಂಧವಿದೆ ಎನ್ನುವುದು ನಮ್ಮ ಯುವ ಕವಿಗಳು ಸ್ಪಂದಿಸಿದ ರೀತಿಯಲ್ಲಿಯೇ ಕಂಡುಕೊಳ್ಳಬಹುದಾಗಿದೆ.

ದ. ಆಫ್ರಿಕಾದ ವರ್ಣವಿರೋಧಿ ನೀತಿಯನ್ನು ತಮ್ಮ ಅಸ್ತ್ರವನ್ನಾಗಿ ಮಾಡಿಕೊಂಡ ಬ್ರಿಟಿಶರೇ ಇಂಡಿಯಾವನ್ನು ಆಳಿದ್ದರು. ಅದರ ವಿಮೋಚನಾ ಹೋರಾಟದ ಅನುಭವ ನಮಗೆ ದೂರವಾಗಿಲ್ಲ. ಎರಡನೆಯ ಮುಖ್ಯ ಸಂಗತಿ ದಕ್ಷಿಣ ಆಫ್ರಿಕಾದ ವರ್ಣಭೇದ ನೀತಿಗೂ ನಮ್ಮಲ್ಲಿ ಅಸ್ಪೃಶ್ಯತೆಯ ವಿಧಾನಕ್ಕೂ ತೀರ ಸಂಬಂಧವಿದೆ. ಒಂದು ಬಗೆಯಿಂದ ಇಂಡಿಯಾದಲ್ಲಿ ದಲಿತ ಚಳವಳಿ ದ.ಆಫ್ರಿಕಾದ ಚಳವಳಿಯಿಂದ ಸ್ಫೂರ್ತವಾಗಿದೆ.

ದ. ಆಫ್ರಿಕಾದ ನೇಶನಲ್ ಕಾಂಗ್ರೆಸ್ ಮೊದಲು ಅಹಿಂಸಾ ರೀತಿ-ಗಾಂಧೀ ಹೋರಾಟವನ್ನೇ ಪ್ರಾರಂಭಿಸಿತು. ಆದರೆ ಸರಕಾರ ತನ್ನ ನೀಚತನದಿಂದ ಅನಿವಾರ್ಯವಾಗಿ ಹೋರಾಟಗಾರರ ಕೈಯಲ್ಲಿ ಶಸ್ತ್ರ ಬರುವಂತೆ ಮಾಡಿತು. ಅದರ ಪರಿಣಾಮವಾಗಿ ಮಂಡೇಲಾ ತುರಂಗವಾಸ ಕಾಣಬೇಕಾಯಿತು. ಈಗಲೂ ಮಂಡೇಲಾ ಅಹಿಂಸಾವಾದಿ. ಆದರೆ ಅವರೇನೂ ಶಸ್ತ್ರ ಸನ್ಯಾಸವನ್ನೇನೂ ಮಾಡಲಿಲ್ಲ. ಇಂಥ ಸಂದರ್ಭದಲ್ಲಿ

ಮುಂಡೇಲುರನ್ನು ಕಣ್ಮಣಿಯಂತೆ, ಹೋರಾಟದ ಧ್ರುವತಾರೆಯಂತೆ ಕಾಣುವ ನಮ್ಮ ಯುವ ಕವಿಗಳ ಅಭಿವ್ಯಕ್ತಿ ತುಂಬಾ ಮಹತ್ವದ್ದೂ, ಆಶಾವಾದದಿಂದೊಡಗೂಡಿದ್ದೂ ಆಗಿದೆ. ಇಂಡಿಯಾ ಊಳಿಗಮಾನ್ಯ, ಬಂಡವಾಳಶಾಹಿ ಮತ್ತು ಅಸ್ಪೃಶ್ಯತೆ-ಜಾತಿ ವಿರುದ್ಧದ ಹೋರಾಟದಲ್ಲಿ ತೆಗೆದುಕೊಳ್ಳಬೇಕಾದ ವಿವೇಚನೆ ಕೂಡ ಈ ಕವನ ಸಂಕಲನದ ಧ್ವನಿಯಾಗಿದೆ.

ಈ ಸಂಕಲನ ಚಂದ್ರಶೇಖರ ಪಾಟೀಲ, ಮಹೇಂದ್ರ ಪ್ರಸಾದ, ದುರ್ಗದ ರಾಜೇಗೌಡ, ವೇಣುಗೋಪಾಲ ಸೊರಬ, ಸಂಧ್ಯಾ ಬಾದಗದ್ದೆ, ಶ. ಗ. ನಯನತಾರೆ, ಬಿ. ಕುಸುಮಾ ಪ್ರಕಾಶ್, ಜಿ ಎಸ್. ಕುಸುಮಲತಾ, ವಿಠ್ಠಲರಾವ್ ಗಾಯಕ್ವಾಡ್, ಕೆ. ಎಸ್. ನಂದಾ, ಎಚ್. ಶೇಷಗಿರಿರಾವ್, ಬಿ. ಪೀರಬಾಷ್, ಕೆ.ಬೈರಪ್ಪ ವಿಠ್ಠಲಾಪುರ, ಅಮೃತ್ ಜೋಗಿ, ಜಲವಿಗೆರೆ ನಾಗರಾಜ, ಆರ್. ಆರ್. ಒಂಟೆತ್ತು, ತಾ. ಸಿ. ತಿಮ್ಮಯ್ಯ, ಆರ್. ಡಿ. ಕುಮಾರ, ಕೆ. ಸಿ. ಕೃಷ್ಣಪ್ಪ, ಸಂಗಮೇಶ ವಿ. ಹೊಸಮನಿ, ಎಂ. ಆರ್. ಮಾರುತಿ, ಅಶೋಕ ಬಸವನಹಳ್ಳಿ ಜಿ. ಕೆ. ಲಕ್ಷ್ಮೀನರಸಿಂಹಯ್ಯ. ಕೋ. ಸಿ. ನಂಜುಂಡೇಗೌಡ ಕೋಶಾಲ, ಬಸೂ, ದಿನೇಶ ಕೆ. ಕಾರ್ಯಪ್ಪ, ಜಯಶ್ರೀ ಗೊರಪ್ಪಾಳ್ ಇವರುಗಳ ಇಪ್ಪತ್ತಾರು ಕವನ, ಒಂದು ಪ್ರತಿಕ್ರಿಯೆಯನ್ನೊಳಗೊಂಡಿದೆ.

ಈ ಕವನ ಸಂಕಲನ ಮಹೇಂದ್ರ ಪ್ರಸಾದರ ಹೋರಾಟಪರವಾದ ಮನಸ್ಸಿನ ನಿಲುವಿಗೆ ಸಾಕ್ಷಿಯಾಗಿದೆ. ಈ ಸಂದರ್ಭದಲ್ಲಿ ಹೊರಬಂದ ಸಂಕಲನ ಬಂಡಾಯದ ಧ್ವಜವನ್ನು ಎತ್ತಿ ಹಿಡಿಯುವ ಸಾಹಸವಾಗಿದೆ. ಆದ್ದರಿಂದಲೇ ಮಹೇಂದ್ರರ ಕವನಗಳ ಆಯ್ಕೆಯ ಸಾಹಿತ್ಯಕ ಔಚಿತ್ಯದ ಪ್ರಜ್ಞೆಯನ್ನು ಪ್ರಶ್ನಿಸುವುದೇ ಇಲ್ಲಿಯ ಮುಖ್ಯ ಉದ್ದೇಶವೇ ಅಲ್ಲ. ಬದಲಾಗಿ ಬಂಡಾಯದ ಸಂದರ್ಭದ ಆಶಯವನ್ನು ಎತ್ತಿಹಿಡಿಯುವ, ಹರಿದು ಹಂಚಿಹೋಗಬಹುದಾದ, ಆಕಾರವಿಲ್ಲದೆ ಮಾಯವಾಗಬಹುದಾದ ಸಾಮೂಹಿಕ ಅಭಿವ್ಯಕ್ತಿಗೆ ಆಕಾರ ಕೊಟ್ಟ ಶ್ರೇಯಸ್ಸು ಅವರದಾಗಿರುವುದರಿಂದ ಅವರನ್ನು ಅಭಿನಂದಿಸಬೇಕಾಗಿದೆ.

ಆರ್. ವಿ. ಭಂಡಾರಿ

## ಈ ಸಂಚಿಕೆಯ ಲೇಖಕರು

**ಡಾ. ಜಿ. ರಾಮಕೃಷ್ಣ** ಇಂಗ್ಲೀಷ ಪ್ರಾಧ್ಯಾಪಕರು, ನ್ಯಾಶನಲ್ ಕಾಲೇಜು, ಬೆಂಗಳೂರು ೫೬೦ ೦೮೪ **ಯೋಗೀಂದರ್ ಸಿಕಂದ್** ಎಂ. ಫಿಲ್ ವಿದ್ಯಾರ್ಥಿ, ಸೆಂಟರ್ ಫಾರ್ ದ ಸ್ಟಡಿ ಆಫ್ ಸೋಶಿಯಲ್ ಸೈನ್ಸಸ್, ಜೆ ಎನ್. ಯು., ಹೊಸದಿಲ್ಲಿ **ನಾ. ದಿವಾಕರ** ೨೩೭೮, ಕಾವ್ಯ, ವಿವೇಕಾನಂದ ನಗರ, ಬಂಗಾರಪೇಟೆ ೫೬೩೧೧೪ **ಸದಾನಂದ ಪಾಟೀಲ** ಕನ್ನಡ ಉಪನ್ಯಾಸಕ, ಸರಕಾರಿ ಜ್ಯೂ. ಕಾಲೇಜು, ಹಳಿಯಾಳ ೫೮೧೩೨೯ **ಗಣೇಶ ಅಮೀನಗಡ** ಸಂಶೋಧನ ವಿದ್ಯಾರ್ಥಿ, ಕನ್ನಡ ವಿ. ವಿ., ಹಂಪಿ ೫೮೩೨೧೧ **ಡಾ. ರಹಮತ ತರೀಕೆರೆ** ಪ್ರಾಧ್ಯಾಪಕ, ಕನ್ನಡ ವಿ. ವಿ. ಹಂಪಿ ೫೮೩ ೨೧೧ **ವೇಣುಗೋಪಾಲ ಸೊರಬ** ೨೫, ಬಳ್ಳಿಗಾವೆ, ದತ್ತಾತ್ರೇಯ ನಗರ, ಬನಶಂಕರಿ, ೨ನೇ ಹಂತ, ಬೆಂಗಳೂರು ೫೬೦೦೮೫ **ಆರ್ ವಿ. ಭಂಡಾರಿ** ಅರೆಅಂಗಡಿ (ಹೊನ್ನಾವರ-ಉ. ಕ.) ೫೮೧೪೩೦ **ಜಿ. ಕೆ. ರವೀಂದ್ರಕುಮಾರ** ಕಾರ್ಯಕ್ರಮ ನಿರ್ವಾಹಕ, ಆಕಾಶವಾಣಿ, ಧಾರವಾಡ-೫೮೦೦೦೮ **ಎಂ. ಎಚ್. ಲಕ್ಷ್ಮೀನರಸಮ್ಮ** ೬೮೯/೧. ಶಂಕರ ಕೃಪ. ೧೧ನೇ ಎ ಮೇನ್, ೪ನೇ ಬ್ಲಾಕ್, ಜಯನಗರ. ಬೆಂಗಳೂರು ೫೬೦೦೧೧ **ಬಿ. ಚಿನ್ನಸ್ವಾಮಿ** ನಂ. ಎಂ. ಎಫ್. ೧೪/೭, ಬಿ. ಟಿ.ಎಂ. ಲೇಔಟ, ಬನ್ನೇರುಘಟ್ಟ ರಸ್ತೆ, ಬೆಂಗಳೂರು-೫೬೦೦೭೬ **ವಿಡಂಬಾರಿ** (ನಾಯಕ ವಿ. ಗ.) ಸ್ಮೃತಿ ಪ್ರಕಾಶನ, ಅಡ್ಯನಡ್ಕ (ದ. ಕ.) ೫೭೪೨೬೦ **ಎನ್. ಎ. ಕುಲಕರ್ಣಿ** ಹಿಂದಿ ಪ್ರಾಧ್ಯಾಪಕ, ಸೇಂಟ ಥೆರೆಸಾಜ್ ಜ್ಯೂ. ಕಾಲೇಜು, ಕ್ಯಾಂಡಲಿವ್, ಬಾರ್ಡೆಜ್. ಗೋವಾ ೪೦೩೫೦೭ **ಭಾರತಿ ಪಾಟೀಲ** ಶ್ರೀಗಿರಿ, ಕಲ್ಯಾಣ ನಗರ, ಸಿಂದಗಿ ೫೮೬೧೨೮ **ಮುಕುಂದ ಜೋಷಿ** ಎ-೬, ಸೇಜಲ ಅಪಾರ್ಟಮೆಂಟ್ಸ್ ದೇವಿದಯಾಲ ರಸ್ತೆ, ಮುಳುಂದ (ಪ), ಮುಂಬಯಿ ೪೦೦೦೮೦ **ಯಶೋದ ರಾಜೇಂದ್ರ** ಎ ಎಲ್-೩೦, ಕೆ ಆರ್ ಇಸಿ, ಶ್ರೀನಿವಾಸ ನಗರ (ದ.ಕ.) ೫೭೬೧೧೩

## ಸಂಕ್ರಮಣ ಕಾವ್ಯ ಸಂಚಯ

ಸಂಕ್ರಮಣ ಸಾಹಿತ್ಯ ಸ್ಪರ್ಧೆಯಲ್ಲಿ ೧೯೮೨ ರಿಂದ ೧೯೯೨ ರ ವರೆಗೆ ಅತ್ಯುತ್ತಮವೆಂದು ಆಯ್ಕೆಯಾದ ಎಪ್ಪತ್ತು ಕವನಗಳ ಸಂಕಲನ ಅಚ್ಚಾಗುತ್ತಿದೆ.

ಈ ಸಂಕಲನದ ಬೆಲೆ ರೂ. ೨೫. ೦೦,

# ಸಂಕ್ರಮಣ ಸಾಹಿತ್ಯ ಸ್ಪರ್ಧೆ: ೧೯೯೩

ಎಂದಿನಂತೆ ಈ ವರ್ಷವೂ ಸಂಕ್ರಮಣ ಪ್ರಕಾಶನವು
ವಾರ್ಷಿಕ ಸಾಹಿತ್ಯ ಸ್ಪರ್ಧೆ ಏರ್ಪಡಿಸಿದೆ.

• ಎರಡು ಅತ್ಯುತ್ತಮ ಸಣ್ಣ ಕಥೆ • ಹತ್ತು ಅತ್ಯುತ್ತಮ ಕವನಗಳು •
• ಒಂದು ಅತ್ಯುತ್ತಮ ಲಲಿತ ಪ್ರಬಂಧ •
• ಇಪ್ಪತ್ತೈದು ಅತ್ಯುತ್ತಮ ಹನಿಗವನಗಳು •

ಹೀಗೆ ಅತ್ಯುತ್ತಮ ಕೃತಿಗಳಿಗೆ ಪುಸ್ತಕ ರೂಪದಲ್ಲಿ ಸೂಕ್ತ ಬಹುಮಾನ ನೀಡಲಾಗುವುದು; ಬಹುಮಾನಿತ ಕೃತಿಗಳೆಲ್ಲ ಸಂಕ್ರಮಣ ವಾರ್ಷಿಕ ವಿಶೇಷಾಂಕದಲ್ಲಿ ಪ್ರಕಟವಾಗಲಿವೆ.

## ಸರ್ಧೆಯ ಸಾಮಾನ್ಯ ನಿಯಮಗಳು

೧ ಸಣ್ಣ ಕಥೆ ಹಾಗೂ ಲಲಿತ ಪ್ರಬಂಧಗಳು ಮುದ್ರಣದಲ್ಲಿ ೧೦-೧೨ ಪುಟ ಮೀರದಂತಿದ್ದರೆ ಒಳ್ಳೆಯದು. ಹಾಳೆಯ ಒಂದೇ ಮಗ್ಗಲಿಗೆ ಸ್ಪಷ್ಟವಾಗಿ ಬರೆದು ಅಥವಾ ಟೈಪು ಮಾಡಿಸಿ ಕಳಿಸಬೇಕು.

೨ ಹೆಸರು-ವಿಳಾಸಗಳನ್ನು ಪ್ರತ್ಯೇಕ ಹಾಳೆಯಲ್ಲಿ ಬರೆದಿರಬೇಕು. ಹಸ್ತಪ್ರತಿಗಳನ್ನು ವಾಪಸು ಕಳಿಸುವದಿಲ್ಲ.

೩ ಪ್ರವೇಶ ಧನ: ಒಬ್ಬರೇ ಎಷ್ಟು ಬೇಕಾದರೂ 'ಪ್ರವೇ[illegible] ([illegible])' [illegible]ಸಬಹುದು. ಪ್ರತಿಯೊಂದು ಪ್ರವೇಶಕ್ಕೂ ೫ ರೂ. ಗಳನ್ನು 'ಪ್ರವೇಶಧನ'ವಾಗಿ ಎಂ.ಓ/ಡಿ.ಡಿ. ಮೂಲಕ ಕಳಿಸಬೇಕು. (ಚೆಕ್ ಸ್ವೀಕರಿಸುವುದಿಲ್ಲ)

೪ ಪ್ರತಿಯೊಂದು ಹನಿಗವನಕ್ಕೆ ೨ ರೂ. ಯಂತೆ ಪ್ರವೇಶ ಧನ ಕಳಿಸಿದರೆ ಸಾಕು. ಹನಿಗವನವು ೨೫ ಶಬ್ದಗಳನ್ನು ಮೀರದಂತಿರಬೇಕು.

೫ ಪ್ರವೇಶ ಸ್ವೀಕರಿಸುವ ಕೊನೆಯ ದಿನಾಂಕ: ೧೦ ನವಂಬರ ೧೯೯೩

೬ ವಿಳಾಸ: **ಸಂಕ್ರಮಣ ಪ್ರಕಾಶನ ಧಾರವಾಡ-೫೮೦ ೦೦೧**